ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೯ ಆಗಸ್ಟ್ ೨೦೧೩ ಸಂಚಿಕೆ : ೮




## ಸ್ವಾತಂತ್ರ್ಯೋತ್ಸವ ಹಾರ್ದಿಕ ಶುಭಾಶಯಗಳು




ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆಯ ಹಿರಿಯ ವಿದ್ಯಾರ್ಥಿಗಳ ಸಂಘದ ಬೆಂಗಳೂರು ಘಟಕವನ್ನು ಪರಮಪೂಜ್ಯ ಶ್ರೀ ಶ್ರೀ ಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಶ್ರೀಕ್ಷೇತ್ರ ಧರ್ಮಸ್ಥಳ ಧರ್ಮಾಧಿಕಾರಿಗಳಾದ ಪದ್ಮಭೂಷಣ ಡಾ. ಡಿ. ವೀರೇಂದ್ರ ಹೆಗ್ಗಡೆಯವರು, ಪ್ರೊ. ಎಸ್. ಪ್ರಭಾಕರ್, ಶ್ರೀ ಡಿ. ಸುರೇಂದ್ರಕುಮಾರ್ ರವರು ಹಾಜರಿದ್ದರು.



ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ 51ನೇ ಹುಟ್ಟುಹಬ್ಬವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪಾದಪೂಜೆಯೊಂದಿಗೆ ಆಚರಿಸಲಾಯಿತು.



ಸಿದ್ಧಾರ್ಥ ತಾಂತ್ರಿಕ ಮಹಾವಿದ್ಯಾಲಯದ ಸಭಾಂಗಣದಲ್ಲಿ ಆಯೋಜಿಸಿದ್ದ ಗ್ರಂಥಾಲಯ ಸೇವೆ ಕುರಿತು ರಾಷ್ಟ್ರೀಯ ಶಿಬಿರವನ್ನು ಪೂಜ್ಯ ಶ್ರೀ ಶ್ರೀಗಳವರು ಉದ್ಘಾಟಿಸಿದರು. ವೇದಿಕೆಯಲ್ಲಿ ಡಾ. ಹೆಚ್.ಎಸ್. ಸಿದ್ಧಮಲ್ಲಯ್ಯ ಪ್ರೊ. ಕಾಡದೇವರ ಮಠ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



## ಅಂತರಂಗ





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೪೯ ಆಗಸ್ಟ್ ೨೦೧೩ ಸಂಚಿಕೆ : ೮**

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪



## ಒಳಪುಟಗಳಲ್ಲಿ ....................



**ಚಂದಾ ವಿವರ : ವಾರ್ಷಿಕ ಚಂದಾ ರೂ. 150/-**
**ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00**

## ಅವಲೋಕನ

'ಆಗಸ್ಟ್ ೧೫ ನಮ್ಮ ದೇಶದ ಇತಿಹಾಸದಲ್ಲಿ ಬಹಳ ಮಹತ್ವದ ದಿನ. ಈ ಬೃಹತ್ ರಾಷ್ಟ್ರ ಸಾಂಸ್ಕೃತಿಕವಾಗಿ ಮಾತ್ರವಲ್ಲ, ರಾಜಕೀಯವಾಗಿಯೂ ಒಂದಾದ ದಿನ. ನಮ್ಮನ್ನು ನಾವೇ ಆಳಿಕೊಳ್ಳಲು, ನಮ್ಮ ಭವಿಷ್ಯವನ್ನು ನಾವೇ ರೂಪಿಸಿಕೊಳ್ಳಲು ಸಿದ್ಧರಾದ ದಿನ, ಬದ್ಧರಾದ ದಿನ ಇದು. ಸುಲಭವಾಗಿ ಸಂದ ಕೊಡುಗೆಯೇನೂ ಅಲ್ಲ. ಇದರ ಹಿಂದೆ ಅಸಂಖ್ಯಾತ ಜನರ ತ್ಯಾಗ, ಬಲಿದಾನಗಳ ರೋಮಾಂಚನಕಾರಿಯಾದ ಇತಿಹಾಸವಿದೆ. ಮನೆ ಮಠಗಳನ್ನು ತೊರೆದು ಸೆರೆಮನೆಯಲ್ಲಿ ನರಳಿದ ನೇತಾರರಿದ್ದಾರೆ. ಲಾಠಿ ಏಟಿನಿಂದ ಮೈಮೂಳೆ ಮುರಿಸಿಕೊಂಡ ಸಾವಿರಾರು ಜನ ಸಾಮಾನ್ಯರಿದ್ದಾರೆ. ಬಂದೂಕಿನ ಬಾಯಿಗೆ ಎದೆಯೊಡ್ಡಿದ ವಿದ್ಯಾರ್ಥಿಗಳಿದ್ದಾರೆ. ಅಹಿಂಸೆಯ ಈ ಅಪೂರ್ವ ಹೋರಾಟದಿಂದ ಜಗತ್ತಿನ ಕಣ್ಣು ತೆರೆಯಿಸಿತು ಈ ರಾಷ್ಟ್ರ. ಸ್ವಾತಂತ್ರ್ಯವನ್ನು ಪಡೆದು ಇಷ್ಟು ವರ್ಷಗಳಾದುವು. ಈ ಕಾಲದ ಎತ್ತರದ ಮೇಲೆ ನಿಂತು ಈಗ ನೋಡಬೇಕಾಗಿದೆ. ಎಲ್ಲಿದ್ದೇವೆ? ಎತ್ತ ಹೋಗುತ್ತಿದ್ದೇವೆ? ಎಂಬುದನ್ನು' (ಡಾ॥ ಎಚ್. ತಿಪ್ಪೇರುದ್ರಸ್ವಾಮಿ)

'ಸ್ವಾತಂತ್ರ್ಯ ಬಂತು. ಅದರ ನಂತರ ಪರಿಸ್ಥಿತಿ ಬದಲಾಗಬಹುದೆಂದು ಭಾವಿಸಲಾಯ್ತು. ಆದರೆ ಸ್ವಾರ್ಥ, ಅಸಮಾನತೆ, ಅನೀತಿಗಳು, ಬೆಳೆದು ಸ್ವಾತಂತ್ರ್ಯ ಕೇವಲ ಭ್ರಮೆಯೆಂದು ಕೆಲವೇ ವರ್ಷಗಳಲ್ಲಿ ಸಾಬೀತಾಯಿತು. ಬಯಸಿದ್ದಕ್ಕೂ, ಬಂದದ್ದಕ್ಕೂ ಹೊಂದಿಕೆಯೇ ಇಲ್ಲವಾಯಿತು. ಮೊದಲೇ ಜನಸೇವೆ ಮಾಡಿರಬೇಕೆಂಬ ಯಾವ ನಿಯಮವಿಲ್ಲದೆ ಯಾರು ಬೇಕಾದರೂ ಚುನಾವಣೆಯಲ್ಲಿ ನಿಂತು ರಾಜಕೀಯ ಮುಖಂಡರಾಗಿ ಅಧಿಕಾರ ಪಡೆಯ ಬಹುದಾಯಿತು. ಹೀಗಾಗಿ ಅಡ್ಡದಾರಿಯಲ್ಲಿ ಹಣ ಸಂಪಾದಿಸಿದವರು ಜಾತಿಧರ್ಮದ ಆಧಾರದಿಂದ, ಧನಬಲದಿಂದ ಗೆಲ್ಲತೊಡಗಿದರು. ಅಪರಿಮಿತ ಸಂಪಾದನೆಗೆ, ಅಧಿಕಾರಕ್ಕೆ ರಾಜಕೀಯವು ಸುಲಭ ಮಾರ್ಗ ಒದಗಿಸಿತು. ಜನಗಳು ಓಟುಗಳಾಗಿ ಮಾರ್ಪಟ್ಟರು. ನೀತಿ–ಅನೀತಿ, ಧರ್ಮ–ಅಧರ್ಮ ಯಾವುದು ಯಾವುದೆಂದು ತಿಳಿಯದೆ ಎಲ್ಲ ಕಲಸು ಮೇಲೋಗರವಾದಂತಾಯಿತು. ಹೀಗೆ ಒಂದು ಕಡೆ ಸರ್ಕಾರದ ವೈಫಲ್ಯ, ವ್ಯವಸ್ಥೆಯ ಮುಖವಾಡಗಳು, ತಲೆಯಾಡಿಸುವ ಅಧಿಕಾರಿ ಗಣ, ಕಣ್ಣಿಗೆ ರಾಚುವಂತಿದ್ದರೆ, ಇನ್ನೊಂದು ಕಡೆ ಚಿಂತಕರ ಉದಾಸೀನತೆ, ಕವಿಗಳ ಅಸ್ಪಷ್ಟ ಹೊಗಳಿಕೆಯ ಕಾವ್ಯಗಳು, ಅಸತ್ಯ ಮರೆಮಾಚುವಿಕೆಗಳಿಂದ ಜನಾಂಗವು ನಿಸ್ತೇಜ ಹಾಗೂ ನಿರ್ವೀರ್ಯವಾಯಿತು. ಪ್ರಜಾ ಪ್ರಭುತ್ವದಲ್ಲಿ ಹೌದಪ್ಪಗಳ ಮೇಳ ನಡೆಯಿತು' (ಎಂ.ಎಚ್. ಕೇಶವರಾವ್ ಪ್ರಜಾವಾಣಿ, 7 2013)

ಎಷ್ಟೊಂದು ಸರ್ಕಾರಗಳು ಬಂದು ಹೋದವು. ಆದರೆ ಆಗಿರುವುದೇನು? ಹಾಡುಹಗಲೇ ಅತ್ಯಾಚಾರ, ಕೊಲೆ, ಸುಲಿಗೆ, ಬಡವ ಬಡವರಾಗುತ್ತಿದ್ದಾರೆ. ಶ್ರೀಮಂತ ಶ್ರೀಮಂತರಾಗುತ್ತಲೇ ಇದ್ದಾನೆ. 'ಬಡವರು ಸತ್ತರೆ ಸುಡಲಿಕ್ಕೆ ಸೌದಿಲ್ಲ। ಒಡಲ ಕಿಚ್ಚಿನಲಿ ಹೆಣಬೆಂತೋ। ಜವರಾಯ ಬಡವರಿಗೆ ಸಾವ ಕೊಡಬೇಡ।' ಎಂಬಂತಹ ದುಸ್ಥಿತಿ. ಚುನಾವಣೆಗೆ ಮುನ್ನ ಕಡುಬಡವನಾಗಿದ್ದವನು, ಸಾಲಸೋಲ ಮಾಡಿಕೊಂಡಿದ್ದವನು ಇಂದು ರಾಜಕೀಯಕ್ಕಿಳಿದು ಕೋಟಿ ಕೋಟಿ ರೂಪಾಯಿಗಳ ಒಡೆಯನಾಗಿದ್ದಾನೆ. ದುಡಿದು ತಿನ್ನಬೇಕೆಂಬ ಜೀವನ ಶೈಲಿಯೇ ಇಲ್ಲವಾಗಿದೆ. ಇದ್ದರು 'ಅಲ್ಪ ಶ್ರಮ, ಅಧಿಕಲಾಭ' ದೃಷ್ಟಿ – 'ಜಗದಗಲ ಮುಗಿಲಗಲ ಮಿಗೆಯಗಲ'ವಾಗಿದೆ.

–ಸಂಪಾದಕ





## ಆತ್ಮಶಕ್ತಿ



ಆತ್ಮಶಕ್ತಿ ಬಹಳ ದೊಡ್ಡದು. ಹಣಬಲ, ಜನಬಲ, ಅಧಿಕಾರಬಲ, ಮತ್ತೆಲ್ಲ ಬಲಗಳಿಗಿಂತ ಆತ್ಮಬಲ ದೊಡ್ಡದು, ಆತ್ಮಬಲದಿಂದ 'ಇರುವೆ ರುದ್ರನಾಗಬಲ್ಲದು', ರವಿ ಮುಳುಗದ ಸಾಮ್ರಾಜ್ಯವನ್ನು ಕಟ್ಟಿದವರು ಬ್ರಿಟಿಷರು. ಅಂಥವರ ಮಹಾಬಲವನ್ನು ಎದುರಿಸಿ ನಿಂತವರು ಮಹಾತ್ಮಾ ಗಾಂಧೀಜಿ, ಭರತ ಖಂಡಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟ ಮಹಾ ಆತ್ಮಬಲವುಳ್ಳವರಾಗಿದ್ದರು. ಅಹಿಂಸೆಯ ಮಾರ್ಗದಿಂದ ಹೊಸ ರಾಷ್ಟ್ರ ನಿರ್ಮಾಣಕ್ಕೆ ನಂದಾದೀಪವಾದವರು. ವ್ಯಕ್ತಿಯಾಗಲೀ, ಸಂಸ್ಥೆಯಾಗಲೀ, ಪಕ್ಷವಾಗಲೀ, ಪ್ರಭುತ್ವವಾಗಲೀ, ಆತ್ಮಶಕ್ತಿ ಇಲ್ಲದೇ ಹೋದರೆ ಪ್ರಬುದ್ಧಮಾನಕ್ಕೆ ಬರಲಾಗದು. ನಮ್ಮ ಉದಾಹರಣೆಯನ್ನೇ ಕೊಡುವುದಾದರೆ, ನಮಗೆ ಶ್ರೀಮಠದ ಸೇವಾದೀಕ್ಷಾಧಿಕಾರವನ್ನು ನೀಡಿದ ಪೂಜ್ಯ ಗುರುಗಳು ದುಡಿದು ಉಣ್ಣುವುದನ್ನು, ದುಡಿದು ತಂದದ್ದನ್ನು ನೀಡಿ ಉಣ್ಣುವುದನ್ನು, ಅದಕ್ಕಿಂತ ಮಿಗಿಲಾಗಿ ನೈತಿಕಶಕ್ತಿಯನ್ನು ಕಾಪಾಡಿಕೊಂಡು ಬರುವುದನ್ನು, ಲಿಂಗಪೂಜಾನಿಷ್ಠೆಯನ್ನು ಬೆಳೆಸಿಕೊಳ್ಳುವುದನ್ನು, ಬ್ರಹ್ಮಚರ್ಯ ಪರಿಪಾಲನೆಯ ಮಹತ್ವವನ್ನು ತೋರಿಸಿಕೊಟ್ಟ ಪುಣ್ಯ ಪುರುಷರು. ಪೂಜ್ಯರು ತೋರಿಸಿದ ದಾರಿಯಲ್ಲಿ ನಡೆದು ಬಂದಿದ್ದೇವೆ ಎಂಬ ತೃಪ್ತಿ ಇದೆ, ಸಂಸ್ಥೆ ಅಂದಿನಿಂದಲೂ ಬೆಳೆದು ಬಂದಿದೆ. ನಮಗೇ ಆಶ್ಚರ್ಯವಾಗುವಷ್ಟು ಬೆಳೆದು ಬಂದಿದೆ. ಇದೆಲ್ಲಕ್ಕೆ ಕಾರಣ 'ಗುರುತೋರಿದ ಮಾರ್ಗ', ಆತ್ಮಶಕ್ತಿಯ ದರ್ಶನ. ಇದು ಆತ್ಮಸ್ತುತಿಯಾಗಲೀ, ಆತ್ಮಪ್ರಶಂಸೆಯಾಗಲೀ ಅಲ್ಲ, ಆತ್ಮಶಕ್ತಿಯ ಸತ್ಯದರ್ಶನವೆಂದೇ ನಮ್ಮ ನಂಬಿಕೆ. ಇದು ಜೀವನ ನಮಗೆ ಕಲಿಸಿದ ಪಾಠ. ಯಾರೇ ಆಗಲಿ ಸ್ವಾವಲಂಬಿಯಾಗಬೇಕು. ಪರಾವಲಂಬನ ಆತ್ಮಬಲವನ್ನು ಬೆಳೆಸಲಾರದು. ಕಷ್ಟಗಳಿಗೆ, ಸಮಸ್ಯೆಗಳಿಗೆ, ಪ್ರಭಾವಗಳಿಗೆ, ಪ್ರಲೋಭನೆಗಳಿಗೆ ಅವಕಾಶವನ್ನು ಕೊಡದ ರೀತಿಯಲ್ಲಿ ಆತ್ಮಶಕ್ತಿಯನ್ನು ಸಂವರ್ಧಿಸಿಕೊಳ್ಳಬೇಕು. ಬಸವಣ್ಣನವರು ಹೇಳುವಂತೆ 'ಛಲಬೇಕು', ನೈತಿಕ ನಿಷ್ಠೆಯನ್ನು ಅಚಲವಾಗಿ ಉಳಿಸಿಕೊಂಡು ಬರಬೇಕು ಎಂಬುದನ್ನು ಕ್ಷಣ ಕ್ಷಣಾರ್ಧವೂ ಸ್ಮರಿಸುತ್ತಿರಬೇಕು. ಬ್ರಹ್ಮಚರ್ಯ ಪಾಲನೆ, ಪೂಜಾನಿಷ್ಠೆ, ಆತ್ಮಶಕ್ತಿಯ ಎರಡು ಕಣ್ಣುಗಳು.

☆

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ನಿರಾಧಾರ ನಿರಾಲಂಬ ಸರ್ವಾಧಾರ ಸರ್ವಜ್ಞ ಸರ್ವಗತ*
*ಸರ್ವೇಶ್ವರ*
*ನಿನ್ನ ನಿರವಯನೆಂದೆನು ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಸಮಸ್ತ ತತ್ವಂಗಳಿಗೂ ತಾನಾಧಾರವಾಗಿ ತನಗೊಂದಾಸ್ಪದವಿಲ್ಲದ ಅವಲಂಬ ರಹಿತನಾದಂಥ ಸಮಸ್ತಕ್ಕೂ ಆಸ್ಪದನಾದಂಥ ಸಕಲ ಕಲಾಭಿಜ್ಞತ್ವವುಳ್ಳಂಥ ಸರ್ವ ಸಮಸ್ತ ಸ್ಥೂಲ ಸೂಕ್ಷ್ಮ ಪ್ರಾಣಿಗಳಲ್ಲಿ ನಾದ ಚೈತನ್ಯ ಸ್ವರೂಪಿನಿಂದ ಅಡಗಿದಂಥ ಸಮಸ್ತಕ್ಕೊಡೆಯನಾದಂಥ ನಿಷ್ಕಲ ಬ್ರಹ್ಮವನು ನಿರಾಕಾರವಾದ ನಿಷ್ಕಲ ಬ್ರಹ್ಮನೆಂದು ಹೇಳಿದೆನು ಕಾಣಾ ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಇದ್ದು ಇಲ್ಲದ ಸಹಜ ಸ್ಫಟಿಕಶುದ್ಧ ಚೆಲುವೆ
ಬದ್ಧ ಭದ್ರನಾಗಿ ಬೆಳಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕನ್ನಡಿಗೆ ಕನ್ನಡಿಯಾದ ಲೋಕ ಜೀವನದೊಳಗೆ
ಕನ್ನಡಿಯಾದ ಬಸವನಿಗೆ ॥ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಲ್ಲರಂಥವನಲ್ಲ ನನ್ನ ಶಿವ ಶ್ರೀಗುರು
ಬಲ್ಲಿದರೊಳಗಿನ ಬೆಲ್ಲ ಭಕುತರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆ ನುಡಿ ಶುದ್ಧರ ಎಡೆಬಿಡದೆ ತಲೆಕಾಯ್ವ
ಜಡಮತಿಗಳ ಜಂಗಮಗೊಳಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಣಿಕಲ್ಲಾಗಿರುವೆ ಹೆತ್ತು ಪ್ರವಾಗಿರುವೆ
ಆಣಿ ಮುತ್ತಾಗಿರುವೆ ಭಕುತರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಸರಿಲ್ಲದ ಘನವೆಂಬೆ ಪರಸಾರವ ನೀತಂದೆ
ಶೂನ್ಯಶರಣನೆಂಬೆ ಪರಸಾದಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರವೆ ಜಂಗಮ ಸುವಿಚಾರವೆ ಶಿವಭಕ್ತ
ಆಚಾರಸುವಿಚಾರ ಸ್ವಾನುಭಾವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಾಂಛನವ ಧರಿಸಿದ ಕಾಂಚನಕೆ ಕೈನೀಡ್ವ
ಕಾವಿ ಕಾಮಣ್ಣಗಳ ದೂರಿಟ್ಟ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆದರೆ ಹೆಜ್ಜೆಯಿರದ ನಿಂದರೆ ನೆರಳಿರದ
ತೆರೆಯ ಮರೆಯ ಪರಶಿವನಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಲಿಂಗವೆಂಬ ರಸಸಾಗರದೊಳಗೆ
ಓಲಾಡುತಿರುವ ಹೊಸ ಹಡಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಪ್ರಾರ್ಥನಾಯೋಗದ ಉದ್ದೇಶ

–ಶ್ರೀ ಕುಮಾರಸ್ವಾಮಿಗಳವರು *

ಇದೀಗ ಪ್ರಾರ್ಥನಾಯೋಗದ ಮೂಲೋದ್ದೇಶಕ್ಕೆ ನಾವು ಬಂದು ಮುಟ್ಟಿದ್ದೇವೆ. ಪ್ರಾರ್ಥನಾಯೋಗವನ್ನು ಮಾಡುವಾಗ ಅಥವಾ ಮಾಡುವುದರಿಂದ ಪ್ರಭುಶಕ್ತಿಯು ಇಳಿದು ಬಂದು ಕಾರ್ಯ ಮಾಡುತ್ತದೆ. ಇದರಲ್ಲಿ ಪ್ರಾರ್ಥನಾಯೋಗದ ಮುಖ್ಯ ಉದ್ದೇಶ ದ್ವಿವಿಧವಾಗಿದೆ: ೧) ಶಾಂತಿ ಪ್ರಸ್ಥಾಪನೆ ಹಾಗೂ ೨) ಶಕ್ತಿಪ್ರಾಪ್ತಿ. ಶಾಂತಿಯ ಭದ್ರವಾದ ತಳಹದಿಯ ಮೇಲೆ ಶಕ್ತಿಯ ಮಂದಿರವು ಕಟ್ಟಲ್ಪಡಬೇಕು. ಬರಿಯ ಶಕ್ತಿಯೊಂದೇ ಒಳಿತಿಗೂ ಕಾರಣವಾಗಬಹುದು, ಕೆಡುಕಿಗೂ ಕಾರಣವಾಗಬಹುದು. ಉಗ್ರ ತಪಸ್ಸಿಗೆ ಫಲವನ್ನು ನೀಡುವ ದೇವನು ಆ ಫಲದ ಉಪಯೋಗದ ವಿಷಯದಲ್ಲಿ ಮಾನವನಿಗೆ ಸ್ವಾತಂತ್ರವನ್ನು ಕೊಡುತ್ತಾನೆ. ಪ್ರಭುಶಕ್ತಿಯ ಸದುಪಯೋಗದ ಮತಿಯನ್ನು ಪಡೆದುಕೊಳ್ಳದಿದ್ದರೆ, ತಪಸಿಗೆ ಕುಳಿತ ಇಬ್ಬರು ಪ್ರತಿಸ್ಪರ್ಧಿಗಳು ಒಬ್ಬರನ್ನೊಬ್ಬರು ಕೆಡಿಸಲೋಸುಗ ಹಾರೈಸಿ, ಸಿದ್ಧಿಯ ಕೊನೆಗೆ ಒಬ್ಬನು ಇನ್ನೊಬ್ಬನ ಎರಡು ಪಟ್ಟು ಕೇಡನ್ನೇ ಬಯಸಿ, ಒಬ್ಬನು ಒಂದು ಕಣ್ಣನ್ನು ಇನ್ನೊಬ್ಬನು ಎರಡು ಕಣ್ಣುಗಳನ್ನು ಕಳೆದುಕೊಂಡ ತೆರನಾಗುವದು. ಹೀಗೆ ಪ್ರಾಪ್ತವಾದ ದೈವೀ ಶಕ್ತಿಯನ್ನು ದುರುಪಯೋಗಿಸಬಾರದು. ಆ ಶಾಂತಿಯನ್ನೊಡಗೂಡಿದ ಶಕ್ತಿಯು ಸದಾ ಒಳಿತನ್ನೇ ಮಾಡೀತೇ ವಿನಾ ಕೆಡುಕನ್ನೆಂದಿಗೂ ಮಾಡಲಾರದು, ರೋಗ ರುಜಿನಗಳನ್ನೂ, ಇನ್ನಿತರ ಬಾಧೆಗಳನ್ನು ನಿವಾರಿಸಿಕೊಳ್ಳಲು ಅದನ್ನು ಧಾರಾಳವಾಗಿ ಉಪಯೋಗಿಸಿಕೊಳ್ಳಬಹುದು, ಇದೇನು ತಪ್ಪಲ್ಲ; ಯಾಕೆಂದರೆ 'ಶರೀರಮಾದ್ಯಂ ಖಲು ಧರ್ಮಸಾಧನಮ್' ವೈಯಕ್ತಿಕ ಸ್ವಭಾವದ ಉತ್ತಮತೆಗಾಗಿ, ಸತ್ಕಾರ್ಯಕ್ಕಾಗಿ, ಅನ್ಯರ ಹಿತಕ್ಕಾಗಿ, ಸಮಾಜ ಕುಟುಂಬಗಳ ಕಲ್ಯಾಣಕ್ಕಾಗಿ ಪ್ರಾರ್ಥನೆಯ ಕಾಲಕ್ಕೆ ಇಳಿದು ಬರುವ ಪ್ರಭುಶಕ್ತಿಯ ಉಪಯೋಗವನ್ನು ಮಾಡಿಕೊಳ್ಳಬೇಕು.

**ನಿದರ್ಶನಗಳು :**

ಶಾಂತಿ ಪ್ರಸ್ಥಾಪನೆ ಹಾಗೂ ಶಕ್ತಿಪ್ರಾಪ್ತಿಗಳು ಪ್ರಾರ್ಥನಾಯೋಗದಿಂದ ಸಾಧ್ಯವಾಗುವುದೆಂಬುದಕ್ಕೆ ಸಾಕ್ಷಿಯೇನು? ಇದಕ್ಕೇನಾದರು ನಿದರ್ಶನಗಳಿವೆಯೆ? ಎಂಬ ಪ್ರಶ್ನೆಗಳು ಮೂಡಿಕೊಳ್ಳುವುದು ಸ್ವಾಭಾವಿಕ. ಹಾಗೆ ಸಂಶಯಕ್ಕೊಳಗಾಗುವುದು ಎಷ್ಟು ಸಹಜವಾಗಿದೆಯೋ ಅಷ್ಟೇ ಅದರ ಉತ್ತರವೂ ಸುಲಭವಾಗಿದೆ. ವಿಶ್ವದ ಒಂದಿಲ್ಲೊಂದು ಮೂಲೆಯಲ್ಲಿ ಕಾಲಕಾಲಕ್ಕೆ ಜನಿಸಿ ಇಂಥ ಜೀವನವನ್ನು ಸಾಗಿಸಿದ ಮತ್ತು ಸಾಗಿಸುತ್ತಿರುವ ಸಂತರ ಸತ್ಪುರುಷರ ಸಾಧುಜೀವಿಗಳ ಮಹಾತ್ಮರ ಪುಣ್ಯಕರವಾದ ಜೀವನಗಳೇ ದೈವೀಸ್ವಭಾವದಲ್ಲಿ ಮಾನವ ಸ್ವಭಾವವು ಪ್ರಾರ್ಥನೆಯಿಂದ ಪರಿವರ್ತನೆಯಾಗುವುದಕ್ಕೆ ಸಾಕ್ಷಿಯಾಗಿವೆ. ಮಹಾತ್ಮಾಗಾಂಧಿಯವರು ಒಂದೆಡೆ ಪ್ರಾರ್ಥನೆಯ ಮಹತ್ವವನ್ನು ಕುರಿತು ಹೇಳುವಾಗ, 'ಈಶ್ವರ ಪ್ರಾರ್ಥನೆಯು ನನ್ನ ರಕ್ಷಣೆಯನ್ನು ಮಾಡಿತು. ಪ್ರಾರ್ಥನೆಯ ಆಶ್ರಯವನ್ನು ಪಡೆಯದಿದ್ದರೆ ನಾನು ಅಂದೆಂದೊ ಹುಚ್ಚನಾಗಿ ಹೋಗುತ್ತಿದ್ದೆ. ಅನ್ಯರಂತೆ ಸಾರ್ವಜನಿಕ ಹಾಗೂ ವೈಯಕ್ತಿಕ ಜೀವನದಲ್ಲಿ ನಾನಾದರೂ ಬಹುಕಟುವಾದ ಅನುಭವಗಳನ್ನು ಅನುಭವಿಸಬೇಕಾಯಿತು ಅದರಿಂದಾಗಿ ನನ್ನ ಅಂತರಂಗದಲ್ಲಿ ಕೆಲವು ಸಮಯದವರೆಗೆ ಒಂದು ಬಗೆಯ ನಿರಾಶೆ ಕವಿಯಿತು. ಆ ನಿರಾಶೆಯನ್ನು ದೂರ ಮಾಡುವುದರಲ್ಲಿ ನನಗೇನಾದರೂ ಸಫಲತೆ ಉಂಟಾಗಿದ್ದರೆ ಅದು ಕೇವಲ ಪ್ರಾರ್ಥನೆಯಿಂದಲೇ! ಪ್ರಾರ್ಥನೆಯಿಲ್ಲದೆ ಮನಸ್ಸಿಗೆ ನೆಮ್ಮದಿಯಾಗದಂಥ ಒಂದು ಸ್ಥಿತಿಯೂ ನನಗೆ

* ನವಕಲ್ಯಾಣಮಠ, ಭೂಸಪೇಠ, ಧಾರವಾಡ.

'ವ್ಯಕ್ತಿಗಳಿಗೆ ಒಂದು ಹೆಸರಿಡುವಂತೆ ವಚನಗಳಿಗೂ ಬರೆದವರ ಅಂಕಿತಗಳಿವೆ. ಅಂಕಿತ ಎಂದರೆ ಚಿಹ್ನೆ,ಗುರುತು'
–ಡಾ॥ ಎಸ್. ವಿದ್ಯಾಶಂಕರ್

ಪ್ರಾಪ್ತವಾಯಿತು. ದೇವನ ಬಗೆಗೆ ನನ್ನ ನಂಬುಗೆಯ ಕೊಬ್ಬಿ ಕೊನೆರೊಡೆಯುತ್ತ, ಹಬ್ಬಿ ಹರವರಿಯುತ್ತ ಹೋದಂತೆ ಪ್ರಾರ್ಥನೆಗಾಗಿ ನನ್ನ ಆತುರವು ವಿಸ್ತಾರಗೊಂಡಿತು'-ಎಂದು ಬಹು ಸುಂದರವಾಗಿ ಬಣ್ಣಿಸಿದ್ದಾರೆ.

ಪಾಶ್ಚಿಮಾತ್ಯರಲ್ಲಿಯೂ ಇಂಥ ಉದಾಹರಣೆಗಳಿಗೇನು ಕೊರತೆಯಿಲ್ಲ. ಅಂಥವರಲ್ಲಿ ಒಬ್ಬಿಬ್ಬರ ಹೆಸರನ್ನೂ ಎತ್ತಿಕೊಳ್ಳ ಬಹುದು. ಜಾರ್ಜ್ ಮ್ಯುಲ್ಲರ ಎಂಬ ಅಮೆರಿಕೆಯ ಸತ್ಪುರುಷ ರೊಬ್ಬರ ಕೈಯಲ್ಲಿ ಕಾಸು ಕೂಡ ಇಲ್ಲದೆ ದೊಡ್ಡದೊಂದು ಅನಾಥಾಲಯವನ್ನು ನಡೆಸುತ್ತಿದ್ದಾರೆ. ಪ್ರಭುಶಕ್ತಿಯಲ್ಲಿಯ ತಮ್ಮ ಅಪಾರವಾದ ಅಚಲವಾದ ಶ್ರದ್ಧೆ ಹಾಗೂ ಪ್ರಾರ್ಥನೆ ಗಳ ಸಹಾಯದಿಂದ ಅವರು ಎಂಥ ತೊಂದರೆ ಗಳನ್ನಾದರೂ ಎದುರಿಸುವ ಸಾಮರ್ಥ್ಯ ಪಡೆಯಬಹುದಾಗಿದೆ ಎಂಬುದನ್ನು ವಿವರಿಸುತ್ತಾರೆ. ಅವರು 'A venture of Faith' ಎಂಬ ತಮ್ಮ ಗ್ರಂಥದಲ್ಲಿ ಪ್ರಾರ್ಥನೆಯ ಅನೇಕ ಪವಾಡಗಳನ್ನು ಬರೆದಿದ್ದಾರೆ. ಚಾರ್ಲ್ಸ್ ಫಿಲ್‌ಮೋರೆ ಎಂಬ ಇನ್ನೊಬ್ಬ ಸತ್ಪುರುಷರು ಅಂಗವಿಕಲರು. ಪ್ರಾರ್ಥನೆಯ ಮಹತಿಯನ್ನು ಕಂಡುಕೊಂಡು ಅವರು ಅದರ ಬಲದಿಂದ ಒಂದು ಉತ್ತಮ ವಾದ ಸಂಸ್ಥೆಯನ್ನು ಕಟ್ಟಿ ಅದನ್ನು ಕೇವಲ ಪ್ರಾರ್ಥನೆ ಗಾಗಿಯೇ ಮೀಸಲಿರಿಸಿದ್ದಾರೆ. ಯಾರಿಗಾದರೂ ರೋಗ ರುಜಿನಗಳು ಒದಗಿದ್ದರೆ ಅವರಿಗಾಗಿ ಪ್ರಾರ್ಥನೆಯ ನಂತರ ಪ್ರಸಾದವನ್ನು ಕಳುಹಿಸಿಕೊಡುತ್ತಾರೆ; ಅವರ ರೋಗ ವಾಸಿ ಯಾಗುತ್ತದೆ. ರೋಗ ವಿಮುಕ್ತರಾದ ಜನರು ನೀಡುವ ಸಹಾಯದಿಂದಲೇ ಈ ಸಂಸ್ಥೆಯು ಬಾಳಿಕೊಂಡು ಬಂದಿದೆ. ಹೀಗೆಯೇ ಪ್ರಾರ್ಥನೆಯ ಪ್ರಭಾವದ ಬಗೆಗಿನ ಇಂಥ ಹಲವಾರು ಉದಾಹರಣೆಗಳನ್ನು ಕೊಡಬಹುದು. ಇವುಗಳಿಂದ ವೈಜ್ಞಾನಿಕ ದೃಷ್ಟಿಯನ್ನು ಪಡೆದ ಪಾಶ್ಚಿಮಾತ್ಯರು ಪ್ರಾರ್ಥನೆಯ ಬಗೆಗೆ ಯಾವ ತರಹದ ಸದ್ಭಾವನೆಯನ್ನು ತಾಳಿರುವರೆಂಬುದು ತಿಳಿದುಬರುತ್ತದೆ.

**ಶ್ರದ್ಧೆ-ಶರಣಾಗತಿ :**

ಈ ಅನುಪಮವಾದ ಪ್ರಾರ್ಥನಾಯೋಗವನ್ನು ಮಾಡ ಬೇಕಾದರೆ ಸಾಧಕನಲ್ಲಿರಬೇಕಾದ ಅರ್ಹತೆಯ ಬಗೆಗೆ ಒಂದೆರಡು ಮಾತುಗಳನ್ನು ನಾವು ನೆನಪಿಡಬೇಕು. ಈ ಪ್ರಾರ್ಥನಾಯೋಗದ ಸಾಧಕನಲ್ಲಿ ಎರಡೇ ಎರಡು ಗುಣ ಗಳಿದ್ದರೆ ಸಾಕು ಒಂದು ಶ್ರದ್ಧೆ; ಇನ್ನೊಂದು ಶರಣಾಗತಿ, ಮನುಷ್ಯನಲ್ಲಿ ಅಪಾರವಾದ ಅಚಲವಾದ ಶ್ರದ್ಧೆಯಿದೆ ಎನ್ನುವುದಕ್ಕೆ ತಾಳ್ಮೆಯೇ ಒರೆಗಲ್ಲು! ವಿಪತ್ತೇ ತಾಳ್ಮೆಯ ಓರೆಗಲ್ಲು!! ಈ ಸಹನ ಗುಣವು ಸತ್ವಗುಣದ್ದಾದರೆ, ಆತುರವು ರಜೋಗುಣದ್ದು; ಆಲಸ್ಯ ಹಾಗೂ ಔದಾಸೀನ್ಯಗಳು ತಮೋ ಗುಣ ಪ್ರಧಾನವಾದವುಗಳು. ಶ್ರದ್ಧೆಯಿದ್ದಲ್ಲಿ ಈ ಸಹನಶಕ್ತಿಯು ಅರ್ಥಾತ್ ಸತ್ವಗುಣವು ವೃದ್ಧಿಂಗತವಾಗುತ್ತದೆ. ಶರಣಾಗತಿ ಯೆಂದರೆ, ಆ ಪ್ರಭುವಿನಲ್ಲಿ ಸರ್ವವನ್ನು ಅರ್ಪಿಸುವುದು. ಇದರಿಂದ ದುಡ್ಡು ದುಗ್ಗಾಣಿ, ಹೆಂಡಿರು ಮಕ್ಕಳು ಮುಂತಾದ ವರನ್ನು ಅವನಿಗೆ ಅರ್ಪಿಸಬೇಕೆಂದರ್ಥವಲ್ಲ! ಅವುಗಳ ಅಗತ್ಯವೂ ಅವನಿಗಿಲ್ಲ! ಅಹಂಕಾರವನ್ನು ಆತನಿಗೆ ಒಪ್ಪಿಸ ಬೇಕು. ಇದು ನಿಜವಾದ ಶರಣಾಗತಿ.

ಒಮ್ಮೊಮ್ಮೆ ಸಾಧಕನು ಈ ಪರಮಪ್ರಭುವಿನಲ್ಲಿ ಹೀಗೆ ಅಚಲವಾದ ಶ್ರದ್ಧೆ ಅನುಪಮವಾದ ಶರಣಾಗತಿಯುಳ್ಳವ ನಾಗಿದ್ದರೂ ತೊಂದರೆಗೀಡಾಗುತ್ತಾನೆ, ತೊಳಲುತ್ತಾನೆ. ಆಗ ಒಮ್ಮೊಮ್ಮೆ ನಿರಾಶಾವೃತನೂ ಆಗುತ್ತಾನೆ. ಆದರೆ ಇದು ಪ್ರಭುವಿನ ಬಗೆಗೆ ನಮಗಿರುವ ಅಜ್ಞಾನದ ಕುರುಹು. ಪ್ರಭುವಿನಲ್ಲಿ ಎರಡು ಶಕ್ತಿಗಳಿವೆ: ಅವನಲ್ಲಿ ಅನುಗ್ರಹ ಶಕ್ತಿಯು ಇರುವಂತೆಯೇ ನಿಗ್ರಹಶಕ್ತಿಯು ಇದೆ. ಪ್ರಾರ್ಥನೆಯ ಕಾಲಕ್ಕೆ ನಾವು ಅದೆಷ್ಟೋ ಬೇಡಿಕೆಗಳನ್ನು ಆ ಪ್ರಭುವಿನೆದುರು ಮಂಡಿಸುತ್ತೇವೆ; ಅವೆಲ್ಲ ಬೇಡಿಕೆಗಳೂ ಕೈಗೂಡುವುದಿಲ್ಲ. ನಾವು ಬೇಡಿದ ಬಯಕೆಗಳೆಲ್ಲಾ ಬಳಿಸಾರಲಿಕ್ಕಿಲ್ಲ; ನಾವು ಕೋರಿದ ಕೋರಿಕೆಗಳೆಲ್ಲ ಕೈಸೇರಲಿಕ್ಕಿಲ್ಲ. ಆಗ ನಾವು ಉದ್ವಿಗ್ನ ರಾಗುತ್ತೇವೆ. ಆದರೆ ಅದು ತಪ್ಪು. ನಮಗಿಂತಲೂ ಹೆಚ್ಚಾಗಿ ನಮ್ಮ ಹಿತದ ಅರಿವು ಪ್ರಭುವಿಗಿರುತ್ತದೆ. ಅವನ ಶಕ್ತಿಯು ಆಗಮಗಳಲ್ಲಿ ಪ್ರಣೀತವಾದಂತೆ 'ಅಘಟಿತಘಟನಾಪಟೀಯಸೀ' ಆಗಿರುತ್ತದೆ. ಅವನು 'ಕರ್ತುಮಕರ್ತುಮನ್ಯಥಾ ಕರ್ತುಂ' ಶಕ್ತನಿದ್ದಾನೆ ಸರ್ವಸಮರ್ಥನಿದ್ದಾನೆ. ಅಂಥ ಅನಿರ್ವಚನೀಯ ಶಕ್ತಿಯುಳ್ಳ ಪ್ರಭುವು ಏನನ್ನಾದರೂ ತಡೆಹಿಡಿದರೆ, ಅದನ್ನು ತಮ್ಮ ಹಿತಕ್ಕಾಗಿಯೇ ತಡೆಹಿಡಿಯುತ್ತಾನೆ, ಇಲ್ಲಿ ನಾವೇಕೆ

'ಅರಿವು ಆಚಾರ ಸತ್ಕ್ರಿಯೆಯುಳ್ಳೊಡೆ ಜಂಗಮ' - ಡಾ. ದಿಲ್‌ಷಾದ್





ಇಷ್ಟು ಭಯಗ್ರಸ್ತರಾಗಬೇಕು, ಇಷ್ಟು ನಿರಾಶರಾಗಬೇಕು? ನಾವು ಬೇಡದೆ ಇದ್ದ ಎಷ್ಟೋ ಸಂಗತಿಗಳನ್ನು ಅವನ ಅನುಗ್ರಹಶಕ್ತಿಯು ನಮಗಾಗಿ ಅನುಗ್ರಹ ನೀಡಬಹುದು. ಅದು ಇನ್ನೂ ಏನನ್ನು ಮಾಡಲರಿಯದು? ಸಂಕಟಗಳನ್ನು ಸಮಯಾನುಕೂಲ ಸನ್ನಿವೇಶಗಳನ್ನಾಗಿಯೂ ಸೋಲಿನ ಸ್ಥಿತಿಯನ್ನು ಗೆಲುವಿನ ಗುಟ್ಟನ್ನಾಗಿಯೂ, ದುರ್ಬಲತೆಯ ದುರವಸ್ಥೆಯನ್ನು ಸಬಲತೆಯ ಸಿದ್ಧತೆಯನ್ನಾಗಿಯೂ ಆ ಅನುಗ್ರಹಶಕ್ತಿಯು ತನ್ನ ಸ್ಪರ್ಶಮಾತ್ರದಿಂದ ಮಾರ್ಪಡಿಸ ಬಲ್ಲದು! ಆ ಪ್ರಭುವಿನ ಅನುಗ್ರಹ ಶಕ್ತಿಯು ನಮಗೆ ಗೆಲುವಿನ ಮೇಲೆ ಗೆಲುವನ್ನು, ಅನುಕೂಲತೆಯ ಮೇಲೆ ಅನುಕೂಲತೆ ಯನ್ನು ಒದಗಿಸಿ ನಮ್ಮ ಜೀವನವನ್ನು ನಂದನವನವನ್ನಾಗಿ ಮಾಡುತ್ತಿದ್ದಾಗ, ಅಹಂಕಾರಕ್ಕೊಳಗಾಗಿ 'ನಾನೇ ಮಾಡಿದೆ, ನನ್ನಿಂದಾಯಿತು ಎಂದೆನ್ನದೆ ವಿನಯದಿಂದ ಪುನಃ ಪುನಃ 'ಹೇ ಪ್ರಭೋ ನಿನ್ನ ಅನುಗ್ರಹ ಶಕ್ತಿಗೆ ಜಯವಾಗಲಿ! O Lordi Let thy Grace be glorified! ಈ ರೀತಿಯಾಗಿ ನುಡಿದು ನಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಿರಬೇಕು. ಅದರಂತೆ, ಪ್ರಭುವಿನ ನಿಗ್ರಹಶಕ್ತಿಯು ನಮಗೆ ಅಕಲ್ಯಾಣ ಕಾರಕವಾಗಬಹುದಾದ ಯಾವುದೇ ಬೇಡಿಕೆಗಳನ್ನು ಪೂರೈಸ ದಿದ್ದಾಗ ಅಥವಾ ನಮಗೆ ಮಾತ್ರ ಅನಿಷ್ಟಗಳಾಗಿ ತೋರುವ ಘಟನೆಗಳನ್ನು ನಮ್ಮ ಜೀವನದಲ್ಲಿ ಜರುಗಿಸಿದಾಗ ನಾವು ನಿರಾಶೆಗೆ ಒಳಗಾಗದೆ, .'ಹೇ ಪ್ರಭೋ ನಿನ್ನ ಸಂಕಲ್ಪ ವಿದ್ದಂತಾಗಲಿ! 'O Lord, Let thy will be done!' ಎಂದು ಅನ್ನುತ್ತಿರಬೇಕು. ಮೊದಲಿನ ಅಂತಃಕರಣದುದ್ಗಾರವು ಅಹಂಕಾರದ ಶರಣಾಗತಿಯನ್ನು ಹೇಗೆ ಮಾಡಬೇಕೆಂಬುದನ್ನು ಒತ್ತಿ ಹೇಳಿದರೆ, ಎರಡನೆಯದು ಪ್ರಭುವಿನಲ್ಲಿಯ ನಮ್ಮ ಶ್ರದ್ಧೆಯಲ್ಲಿ ಅಚಲವಾಗಿ ನಾವು ಹೇಗೆ ನಿಲ್ಲಬೇಕೆಂಬುದನ್ನು ಎತ್ತಿ ತೋರಿಸುತ್ತದೆ. ಮಾನವನು ಎರಡು ಕಣ್ಣುಗಳಿಂದ ನೋಡಿದರೆ ದೇವನು ಮೈತುಂಬ ಕಣ್ಣುಗಳಿಂದ ನೋಡುವನು. ಕಾರ್ಯ ಕೈಗೂಡದಿದ್ದರೆ ಉದ್ವಿಗ್ನಗೊಳ್ಳದೆ ಅದು ಬೇಗನೆ ಕೈಗೂಡಲೋಸುಗ ಆತುರತೆಯನ್ನೂ ತಾಳದೆ ನಿನ್ನ ಅನುಗ್ರಹ, ನಿನ್ನ ನಿಗ್ರಹ ಇದ್ದಂತಾಗಲಿ ಎಂದು ಶ್ರದ್ಧೆ ಶರಣಾಗತಿಗಳೊಡನೆ ಜೀವನನೌಕೆಯನ್ನು ಸಾಗಿಸಬೇಕು. ☆

## ಧವಳ ಶಿಖರ

ಅದ್ಭುತ-ಅದ್ಭುತವೆಂದು ಪರರ ಸಾಧನೆಗೆ ಉದ್ಗಾರ
ಎತ್ತುವುದೊಂದೇ ನಿನ್ನ ಕೆಲಸವೆ? ಪ್ರಯತ್ನ
ಶೀಲನಾದಲ್ಲಿ ಫಲವುಂಟು.
ಸಾಧನೆಗಳು ಸಾಕಾರವಾಗಿ ಭಾವಣಿಯಾಗಿರಲು
ಎತ್ತರದ ಧೀಮಂತ ವ್ಯಕ್ತಿತ್ವದ ಸೂಜಿಗಲ್ಲು ಈ ಇವರು
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

* * *

ಎಣ್ಣೆ ಇಲ್ಲದೆ ಬತ್ತಿ ಉರಿದೀತು ಎಷ್ಟು ಹೊತ್ತು?
ಹಣತೆ ಬೇಕು, ಎಣ್ಣೆ ಬೇಕು, ಅದರಲ್ಲಿ ಬತ್ತಿನೆನೆದು
ಹುರಿಗಟ್ಟಬೇಕು, ಭೂತಕಾಲದ ಜ್ಯೋತಿ
ವರ್ತಮಾನದಲ್ಲಿ ಬೆಳಗಿಸಿ, ಭವಿಷ್ಯತ್‌ಗೂ ಪ್ರಭೆ
ಹರಡಿಸುತಿಹರು
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

* * *

ವಿಶ್ವ ಒಂದೇ. ಕಾಣುವ ಕನಸುಗಳು ಅಗಣಿತ
ಸಾಕಾರಕ್ಕೆ ಸತತ ಪರಿಶ್ರಮವಿರಲಿ ನಾವು
ನಮ್ಮದು, ನಮ್ಮವರು ಎನ್ನುವ ಐಕ್ಯತೆಯ
ಮಮಕಾರ ತೋರಿದ ಸಮಚಿತ್ತ ವಿಶ್ವಕುಟುಂಬಿ
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

* * *

ಕೇವಲ ದಾಖಲೆಗಳಿಗಾಗಿಯೇ ಸಾಧನೆಮಾಡಲೇಕೆ?
ಆತ್ಮತೃಪ್ತಿಯ ಜನೋಪಯೋಗಿ ಕೆಲಸಗಳಿಂದ
ಪಡೆಯುವ ಜನಸ್ಪಂದನಕ್ಕೆ ಬೆಲೆ ಕಟ್ಟಲಾಗದು,
ಮಮತಾಮಯಿ ಸಮಾಜಮುಖಿಯಾಗಿ ಕೆಳಸ್ತರದ
ವ್ಯಕ್ತಿಯೂ ಸವಲತ್ತುಗಳು ಲಭಿಸಲು
ಶ್ರಮಿಸುತ್ತಿರುವವರು
ನಿತ್ಯ ನಿರಂತರ ಕಾಯಕಯೋಗಿ
ಶ್ರೀ ಗುರು ಶಿವಸಿದ್ಧಗಂಗಾಧೀಶ

-ಶ್ರೀಮತಿ ಚಂದ್ರಕಾಂತಿ ಕಾಶೀನಾಥ್
ಬಸವೇಶ್ವರ ನಗರ, ಶಿವಮೊಗ್ಗ.

'ಮತ ಎಂದರೆ ಮುಖ್ಯವಾಗಿ ಸಂಸ್ಕಾರಗಳು, ಕರ್ಮಾಚರಣೆಗಳು' - ಡಾ|| ಎಂ. ಚಿದಾನಂದಮೂರ್ತಿ



# ಪಕ್ಕವಿಲ್ಲದ ಹಕ್ಕಿ

-ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ನಮಗೆ ಕಾಣುವ ಜಗತ್ತು ದರ್ಶನಕ್ಕೆ ವಿಷಯ. ಆದ್ದರಿಂದ ಇದು ದೃಶ್ಯ. ಪ್ರಕೃತಿಯ ಅನಂತವಾದ ವಿಸ್ತಾರ ಇದು. ಇದರಲ್ಲಿ ಸ್ಥೂಲ ವಸ್ತುಗಳು ಇವೆ. ಅತ್ಯಂತ ಸೂಕ್ಷ್ಮ ವಸ್ತುಗಳು ಇವೆ. ಮನುಷ್ಯನ ಮತಿ ಸ್ಥೂಲ ವಸ್ತುವನ್ನು ಗ್ರಹಿಸುವ ಹಾಗೆ ಅತಿ ಸೂಕ್ಷ ವಸ್ತುವನ್ನು ಗ್ರಹಿಸುತ್ತದೆ. ಪ್ರಕೃತಿಯ ಸಮಸ್ತ ಹರವನ್ನು ಮಾನವೀಯ ಮತಿ ಅಳೆಯ ಬಲ್ಲದು. ಆದ್ದರಿಂದ ಈ ಜಗತ್ತಿಗೆಲ್ಲ ದೃಶ್ಯ ಎನ್ನಬೇಕು. ಮತಿಗೆ ಇದು ದೃಶ್ಯ. ಈ ದೃಶ್ಯ ವಸ್ತುವನ್ನು ಯಥಾವತ್ತಾಗಿ ಕಂಡರೆ ನಮಗೆ ಸತ್ಯದರ್ಶನ ಆಯಿತು ಎಂದರ್ಥ, ಹೇಗಿದೆ ಹಾಗೆ ಕಂಡರೆ ಸತ್ಯದರ್ಶನ! ಕಣ್ಣಿನಿಂದ ಹಾಗೂ ಬುದ್ಧಿಯಿಂದ ಎಷ್ಟು ನೋಡಲು ಸಾಧ್ಯವೋ ಅದು ಎಲ್ಲವೂ ದೃಶ್ಯ! ಅಧಿಗಮ್ಯ! ಇಂತಹ ಗಮ್ಯ ವಸ್ತುವಿನ ಜ್ಞಾನ ಗಮ್ಯ ಜ್ಞಾನ. ಈ ಜ್ಞಾನವೇ ಪ್ರೇಮಾ ಯಥಾರ್ಥ, ಸತ್ಯಜ್ಞಾನ.

ಈ ಪ್ರಕೃತಿಯನ್ನು ಮೀರಿದ ಅಂದರೆ ಎಲ್ಲಿ ಪ್ರಾಕೃತಿಕ ವಿಕಾರಗಳಿಲ್ಲವೋ, ವಿಕಾಸಗಳಿಲ್ಲವೋ ಗುಣಗಳ ವ್ಯಾಪ್ತಿ ಇಲ್ಲವೋ ಇಂಥ ಕ್ಷೇತ್ರ ಅಗಮ್ಯ ಕ್ಷೇತ್ರ. ಅದು ಅದೃಶ್ಯ. ಅಲ್ಲಿ ಕಣ್ಣಿಗೆ ಪ್ರವೇಶ ಇಲ್ಲ; ಸಾಮಾನ್ಯ ಮತಿಗೆ ಪ್ರವೇಶವಿಲ್ಲ. ಅದು ಋತ. ಎಲ್ಲಿ ಮತಿ ಪ್ರವೇಶಿಸುತ್ತದೆ, ಆ ಸತ್ಯ ವಸ್ತುವಿಗೆ 'ಸತ್ಯ' ಎನಬೇಕು. ಇದೂ ಸತ್ಯವೇ, ಅದೂ ಸತ್ಯವೇ, ಆದರೆ ಇದು ಗಮ್ಯ ಸತ್ಯ; ಅದು ಅಗಮ್ಯ ಸತ್ಯ. ಕಣ್ಣು ಸ್ಪರ್ಶಮಾಡಿ ಅದನ್ನು ದೃಶ್ಯಗೊಳಿಸಿಲ್ಲ. ಮತಿ ಸ್ಪರ್ಶ ಮಾಡಿ ಅದನ್ನು ಗಮ್ಯಗೊಳಿಸಿಲ್ಲ. ಅಷ್ಟು ಶುದ್ಧವಾಗಿರುವ ಸತ್ಯ ಋತ. ಅದರ ಜ್ಞಾನ ಋತಜ್ಞಾನ.

ಜಗತ್ತಿನ ಜ್ಞಾನ ಸತ್ಯಜ್ಞಾನ. ಇದನ್ನು ಪರಿಶೀಲಿಸಲು ಶಕ್ಯ. ಅಳೆಯಲು ಶಕ್ಯ. ಆದರೆ ಋತಜ್ಞಾನವನ್ನು ಪರಿಶೀಲಿಸಲಿಕ್ಕೆ ಆಗದು. ಯಾಕೆ ಎಂದರೆ ಅಳತೆ ಮಾಡುವ ಸಾಧನ ಅಲ್ಲಿ ಇಲ್ಲ. ನಮ್ಮ ದೇಹವನ್ನು ತೂಗಬಹುದು, ಭಾವನೆಗಳನ್ನು ವಿವೇಚಿಸಬಹುದು, ಆಲೋಚನೆಗಳನ್ನು ವಿಮರ್ಶಿಸಬಹುದು, ಆದರೆ ನನ್ನನ್ನು ನನ್ನ ಆತ್ಮವನ್ನು ತೂಗಲಿಕ್ಕೆ ಆಗುವುದಿಲ್ಲ. ಬೀಜ ತೂಗಬಹುದು. ಬೀಜದೊಳಗಿರುವ ಆ ಹಿಟ್ಟನ್ನು ತೂಗಬಹುದು. ಆದರೆ ಆ ಬೀಜದೊಳಗಿರುವ ಪ್ರಾಣಶಕ್ತಿಯನ್ನು ತೂಗಲು ಬರದು. ಅದು ತೂಕಕ್ಕೆ ನಿಲುಕುವುದೂ ಇಲ್ಲ. ಆದರೆ ಅದು ಇರದಿದ್ದರೆ ಬೀಜ ಮೊಳೆಯುವುದಿಲ್ಲ. ಬೀಜ ಮೊಳೆತು ವೃಕ್ಷ ಆಗಬೇಕಾದರೆ ಒಳಗೆ ಆ ಪ್ರಾಣಶಕ್ತಿ ಇರಬೇಕು. ಅದನ್ನು ಅಳೆಯಲಾಗದು.

ಹಾಗೆ, ಜಗತ್ತಿನಲ್ಲಿರುವ ಎಲ್ಲವನ್ನೂ ತೂಗಬಹುದು; ಅಳೆಯಬಹುದು; ನೋಡಬಹುದು; ತಿಳಿಯಬಹುದು. ಆದರೆ, ಜಗದ ಒಳಗೂ, ಅದರಾಚೆಯೂ ಇರುವ 'ಋತ' (ಮಹಾಸತ್ಯ)ವನ್ನು ನೋಟ ಹಾಗೂ ಮತಿಗಳು ಗ್ರಹಿಸವು. ನೋಟ, ಮತಿ, ಮನ ಮೌನವಾದ ಬಳಿಕ ಅನುಭಾವ ದೃಷ್ಟಿ ಉದ್ಘಾಟನೆ. ಆ ದೃಷ್ಟಿಗೆ ಋತದರ್ಶನ! ಆ ದರ್ಶನ ಪಡೆದವ ಋಷಿ!

ಲೋಕಸತ್ಯ ಕಂಡವರೂ ಋಷಿಗಳೇ. ಆದರೆ ಅಲೌಕಿಕ ಋತ ಅನುಭವಿಸಿದವರು ಪರಮಋಷಿಗಳು. ಅವರು ನೇತ್ರ ಹಾಗೂ ಮತಿಗಳನ್ನು ಬಳಸದೆ ಪರಮ ಸತ್ಯ(ಋತ) ಕಂಡವರು. ನಾವು ಭೌತ ಋಷಿಗಳು. ಅವರು ಅಭೌತ ಋಷಿಗಳು! ನಮಗೆ ಅವರಿಗೆ ಒಂದು ಭೇದ. ಆ ಋತವನ್ನು ದರ್ಶನ ಮಾಡಿಕೊಂಡ ಋಷಿಯ ಬಾಳಿನೊಳಗೆ ಋತ ವ್ಯಾಪಿಸುತ್ತದೆ, ಅಭಿವ್ಯಕ್ತವಾಗುತ್ತದೆ. ಋಷಿಯ ಮಾತಿನಲ್ಲಿ ಋತ ಅಭಿವ್ಯಕ್ತವಾಗುತ್ತದೆ. ಋಷಿಯ ಕಣ್ಣಿನೊಳಗೆ ಋತ ಅಭಿವ್ಯಕ್ತವಾಗುತ್ತದೆ. ಋಷಿಯ ಕಾರ್ಯಗಳಲ್ಲಿ ಋತ ಅಭಿವ್ಯಕ್ತವಾಗುತ್ತದೆ. ಆತನ ಜೀವನ ಸಂತ ಜೀವನವಾಗಿ ಮಾರ್ಪಡುತ್ತದೆ. ಋತದರ್ಶಿಯ ಜೀವನ ಋತಮಯ. ಅವನು ಸತ್‌ಪೂರ್ಣಸಂತ. ಆ ಋತದಲ್ಲಿ ತನ್ನನ್ನು ತಾನು ನಿವೇದಿಸಿಕೊಂಡನಾಗಿ ಅವನು ಶರಣ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

'ಸಂಸ್ಕೃತಿ ಎಂಬುದು ಆತ್ಮವ್ಯವಸಾಯದ ಫಲ' -ನವರತ್ನ ರಾಮರಾವ್





ಋಷಿ, ಶರಣ, ಸಂತ! ಅವನು ಜಗತ್ತಿನಲ್ಲಿ ಋತಜ್ಞಾನ ಹರವುತ್ತಾನೆ. ಆದ್ದರಿಂದಾತ ಗುರು.

ಋತದರ್ಶನ ಇಲ್ಲದೆ ಋಷಿ, ಶರಣ, ಗುರು ಆಗಲಾರ. ಋಷಿಯಾದವನ ಮಾತು ಮಂತ್ರ. ಆ ಋತ ದರ್ಶನದ ಛಾಯೆ, ಸುವಾಸನೆ ಮಾತಿನ ಮಧ್ಯೆ ಹೊರಹೊಮ್ಮುವುದಾದರೆ ಅದು ಗುರುವಚನ. ಅದು ಶರಣನ ಮಾತು. 'ಮಾತೆಂಬುದು ಜ್ಯೋತಿರ್ಲಿಂಗ' ಕರುಣ ರಸದ ಕೋಡಿ ಹರಿವ ಕಟಾಕ್ಷದ ಪರತತ್ವ ಅರುಪುವ ಅಲಾಪದ ವರಪುಣ್ಯಮಯ ಶರೀರದ ನಿರಾಭಾರಿ ಸದ್‌ಗುರು ಇರಲೆನ್ನ ಮಾನಸದಲ್ಲಿ' ಋತದರ್ಶನವಾದ ಗುರುವಿನ ಲಕ್ಷಣ ನಿರಾಭಾರಿತ್ವ ಲೋಕದ ಭಾರ ಇರುವುದಿಲ್ಲ. ಲೋಕಜ್ಞಾನದ ಭಾರ ಇರುವುದಿಲ್ಲ. ಲೋಕಾನುಭವ ರಸದ ಮೋಹ ಇರುವುದಿಲ್ಲ. ಆಗ ಆತ ನಿರಾಭಾರಿ! ಆದ್ದರಿಂದಲೇ ನೈಜ ಗುರು ಮಾತನಾಡುವುದೇ ಬೇರೆ. ಸಾಮಾನ್ಯ ಗುರು ಮಾತನಾಡುವುದೇ ಬೇರೆ. ಬಹಳ ವ್ಯತ್ಯಾಸ. ಆಕಾಶದ ನೀರು ಹರಿದು, ಹರಿದು, ಭೂಮಿ ತೊಯ್ದಾಗ ಸಸ್ಯ ನಳನಳಿಸುತ್ತದೆ. ಅದು ಬೇರೆ. ಒಣಗಿದ ಆಕಾಶ, ಬತ್ತಿಹೋದ ಭೂಮಿ, ಸುಡುವ ಭೂಮಿ, ಇಂಥಲ್ಲಿ ನೀರ ಹನಿಸಿ ಹನಿಸಿ ಬೆಳೆ ಬೆಳೆಯುತ್ತೇವೆ. ಆ ಬೆಳೆಯ ಬೆಳವಣಿಗೆ ಬೇರೆ. ಧಾರಾಕಾರವಾಗಿ ಮಳೆ ಸುರಿದರೆ ಭೂಮಿ ತಂಪಾಗುತ್ತದೆ. ಗಿಡಮರಗಳು ನಳನಳಿಸುತ್ತವೆ, ಫಲಿಸುತ್ತವೆ. ಆಕಾಶದ ನೀರು ಬಿದ್ದಂತೆ ಶ್ರೇಷ್ಠರ, ಸಂತರ, ಶರಣರ ಮಾತುಗಳು, ಭೂಮಂಡಲಕ್ಕೆ ಸುರಿದ ಜ್ಞಾನದ ನೀರು. ಆ ನೀರು ಸುರಿದರೆ ಶಾಂತವಾಗುತ್ತದೆ ಜಗತ್ತು. ಪಾಂಡಿತ್ಯದ ನೀರು ನಳದ ನೀರಿನಂತೆ. ಅದು ಪರಿಮಿತ ಅಶುದ್ಧ. ಭೂ ಸ್ಪರ್ಶಿತ, ಲವಣಮಿಶ್ರಿತ.

ಆ ಆಕಾಶದ ನೀರು ಶುಭ್ರ, ಸ್ವಚ್ಛ! ಹಾಗೆ ಶ್ರೇಷ್ಠ ಸಂತರ ಮಾತುಗಳು ಮಂತ್ರಸದೃಶ. ಅದರೊಳಗೆ ಅಶುದ್ಧ ಲವಣವಿಲ್ಲ. ನಾನು ನನ್ನದು ಎನ್ನುವ ಅಶುದ್ಧತೆ ಪಾಂಡಿತ್ಯದ ಮಾತಿನಲ್ಲಿ. ಪರಮಾತ್ಮ ಒಂದು ಹಣ್ಣು ಮಾಡಿ ಕೊಡುತ್ತಾನೆ. ಎಷ್ಟು ರುಚಿಯಾದ ಹಣ್ಣು. ದ್ರಾಕ್ಷಿ ಹಣ್ಣು; ಅದನ್ನು ತಿಂದು ಸಂತೋಷಪಡುವುವು ಪಕ್ಷಿಗಳು. ರಸ ತೆಗೆದು ಅದನ್ನು ಹುಳಿಗೊಳಿಸಿ, ಕೆಡಿಸಿ ವೈನ್ ಮಾಡುತ್ತೇವೆ. ಅದು ಮನುಷ್ಯನಿಗೆ ರುಚಿಸುತ್ತದೆ. ಹಾಗೆ ಪಾಂಡಿತ್ಯದ ಮಾತು ಜನರಿಗೆ ಹಿಡಿಸುತ್ತದೆ. ಏಕೆಂದರೆ ಅದರಲ್ಲಿ ಲವಣಗಳಿವೆ. 'ನಾ' ಎನ್ನುವ ಮಾದಕಾಂಶ ಇದೆ. ನಮ್ಮದು ಒಂದು ಸಣ್ಣ ಮನೆ; ಅದರಲ್ಲಿ ಒಂದೇ ಬಾಗಿಲು. ಸಣ್ಣ ಎರಡು ಕಿಟಕಿಗಳು. ಒಂದು ಸಣ್ಣ ಕೋಣೆ: ಅದರಲ್ಲಿ ನಮ್ಮದೊಂದು ಚಿಕ್ಕಹಾಸಿಗೆ. ಇಷ್ಟಿದ್ದರೆ ನಮಗೆ ಎಷ್ಟು ಆನಂದವಾಗುತ್ತದೆ! ಆ ಮನೆಯೊಳಗೆ ಮಲಗಿದರೆ ಎಷ್ಟು ಸಂತೋಷವಾಗುತ್ತದೆ! ಅದರ ಬದಲು ನಮ್ಮದಲ್ಲದ ಈ ಭವ್ಯ ಮಹಲಿನಲ್ಲಿ ಮಲಗಿದಾಗ ಅಷ್ಟು ಸಂತೋಷವಾಗುವುದಿಲ್ಲ. ಯಾವುದು ರುಚಿ ಕೊಡುತ್ತದೆ? ಆ ರುಚಿ 'ಅಹಂ ಮಮ' ಎಂಬ ಎರಡು ಭಾವದಿಂದ ಬಂದುದು. ಆದರೆ ಆಕಾಶದಿಂದ ಬೀಳುವ ಆ ಭಗವಂತನ ದರ್ಶನ ಮಾಡಿಕೊಡುವ ಜನರ ಮುಖದಿಂದ ಬರುವ ಮಾತಿನಲ್ಲಿ ಅಹಂ ಇಲ್ಲ. ಮಮ ಇಲ್ಲ.

ನಮ್ಮ ಮಾತು ರಸಹೀನ. ಅದರಿಂದ ಅಮಲು ಏರುತ್ತದೆಯೇ ವಿನಃ ದಿವ್ಯ ಆರೋಗ್ಯ ಉಂಟಾಗುವುದಿಲ್ಲ. ಆದರೆ ಜ್ಞಾನಿಗಳ ಮಾತು ಕೇಳಿದರೆ ಆನಂದ ಆರೋಗ್ಯ! ಅವರೇ ನಿರಾಭಾರಿ ಗುರುಗಳು. ಅಹಂ ಮಮದ ಭಾರವಿಲ್ಲದ ಋಷಿಗಳು. ಅವರ ಕಣ್ಣಿನಲ್ಲಿ, ಕರುಳಲ್ಲಿ, ಕಾರುಣ್ಯ ರಸ ಹರಿಯುತ್ತಿದೆ. ಪರತತ್ವವ ಜಗದಿ ಅರುಹುವ ಅದಮ್ಯ ಬಯಕೆ ಅವರಿಗೆ.

'ಆ ಗುರುವಿನ ದೇಹ ವರಪುಣ್ಯಮಯ' ಅಂದರೆ ಬಾಹ್ಯಾಂತರ ಶುದ್ಧ. ಅವರ ನುಡಿ ಆಲಿಸಿ ಚಿಂತಿಸುವುದೇ ಭಗವತ್‌ಚಿಂತನ. ಅಲ್ಲಮಪ್ರಭು ದೇವರು ಇಂತಹ ಒಬ್ಬ ಮಹಾನುಭಾವ. ಆಕಾಶದ ಎತ್ತರದ ತತ್ತ್ವವ ಅರಿತು ಬಟ್ಟಬಯಲಾದ ಅಲ್ಲಮ ನಿರಾಭಾರಿ ಗುರು! ಆತನ ಒಂದು ಪುಟ್ಟ ವಚನ ಹೀಗಿದೆ;

*ಉದಕದೊಳಗೆ ಕಿಚ್ಚು ಹುಟ್ಟಿ ಸುಡುತ್ತಿದ್ದುದ ಕಂಡೆ*  
*ಗಗನದ ಮೇಲೆ ಮಾಮರನ ಕಂಡೆ*  
*ಪಕ್ಕವಿಲ್ಲದ ಹಕ್ಕಿ ಬಯಲ ನುಂಗಿತ್ತ ಕಂಡೆ*  
*ಗುಹೇಶ್ವರಾ*

ಉದಕದೊಳಗೆ ಕಿಚ್ಚು ಹುಟ್ಟಿತು. ಹುಟ್ಟಿದ ಕಿಚ್ಚು ಉದಕದೊಳಗಿರುವ ಕಲ್ಮಶವನ್ನು ಸುಟ್ಟುಹಾಕಿತು. ಉದಕ ಎಂದರೆ ಹೊಯ್ದಾಡುವ ಹರಿದಾಡುವ ಮನಸ್ಸು. ಕೆಳಮುಖವಾಗಿ ಹರಿವುದು ನೀರು. ಮೇಲ್ಮುಖವಾಗಿ ಹರಿಯುವುದಿಲ್ಲ. ಹಾಗೆ ನಮ್ಮ ಮನಸ್ಸು ಕೆಳಗೆ ಹರಿಯುತ್ತದೆ.

'ಲಿಂಗವಂತ ಸಮಾಜವು ಸಿಖ್ ಜನಾಂಗದಂತೆ ಒಂದು ಸ್ವಾಯಂ ಪೂರ್ಣ ವಿಶಿಷ್ಟ ಸಮಾಜ'  
-ಡಾ. ಎಂ. ಚಿದಾನಂದಮೂರ್ತಿ

ಮೊದಮೊದಲು ಮನಸ್ಸು ಶುದ್ಧವೇ. ಆ ಬಳಿಕ ಕಾಲ ಕಳೆದಂತೆ ಅದು ಕೆಳ ಕೆಳಗೆ ಹರಿಯುತ್ತದೆ. ಹೊಲಸಾಗುತ್ತದೆ, ಹೆಚ್ಚು ಚಂಚಲಿಸುತ್ತದೆ. ದುರಾಸೆ ಇತ್ಯಾದಿಗಳು ಅದರಲ್ಲಿ ಹೆಚ್ಚಾಗುತ್ತವೆ. ಕೀಳು ವಿಷಯಗಳತ್ತ ನುಗ್ಗುತ್ತದೆ. ಈ ಪವಿತ್ರ ಮಂದಿರದಲ್ಲಿ ಬೇಕಾದಷ್ಟು ಒಳ್ಳೆಯದಿದೆ. ಮನಸ್ಸು ಅಷ್ಟಾಗಿ ಅದನ್ನು ಗಮನಿಸದೆ ಇಲ್ಲಿರುವ ದೋಷಗಳತ್ತ ಇಣುಕುತ್ತದೆ. ಆ ದೋಷವೇ ಅಂತರಂಗವ ತುಂಬಿಕೊಳ್ಳುತ್ತದೆ. ಜಗತ್ತಿನಲ್ಲಿ ಬೇಕಾದಷ್ಟು ಒಳ್ಳೆಯದಿದೆ. ಅತ್ತ ಲಕ್ಷಿಸದು ಮನಸ್ಸು. ಇಲ್ಲಿರುವ ಹೊಲಸನ್ನೆಲ್ಲಾ ತನ್ನಲ್ಲಿ ತುಂಬಿಕೊಳ್ಳುತ್ತದೆ.

ಜಗತ್ತು ಎಷ್ಟು ಸುಂದರ! ಹಸಿರು, ಹರಿವ ನೀರು, ಹಾರುವ ಹಾಡುವ ಹಕ್ಕಿಗಳು, ಈಜುವ ಮೀನು, ಏನು ಕೆಟ್ಟಿದೆ? ಯಾವ ಪ್ರಾಣಿ ಕೆಟ್ಟಿದೆ? ಯಾವ ಪಶು ಹಾಲಿನಲಿ ನೀರು ಕೂಡಿಸಿ ವಂಚಿಸಿದೆ? ಎಲ್ಲವೂ ಒಳಿತಾಗಿದೆ. ಎಲ್ಲ ಒಳಿತಾಗಿರಬೇಕೆಂದು ಹೇಳುವ ಮನುಷ್ಯನೊಬ್ಬನ ಬಿಟ್ಟು, ಮನಸ್ಸು ಅಂಥ ಸುಂದರ ಜಗತ್ತನ್ನು ಉಪೇಕ್ಷಿಸಿ ಎಲ್ಲೆಲ್ಲಿ ಕುಂದು ಕೊರತೆ ಅಲ್ಪತೆ ಇದೆ ಅದನ್ನೇ ಗಮನಿಸುತ್ತದೆ.

ಜಗತ್ತು ಭವ್ಯ. ಅದನ್ನು ಕೆಡಿಸುವ ತ್ರಾಣ ಮನುಷ್ಯನಿಗೆಲ್ಲಿದೆ? ಬಹಳವಾದರೆ ಈ ಪೃಥ್ವಿಯ ಗಾಳಿಯ ಕೆಡಿಸಬಲ್ಲ. ನೀರು ಕೆಡಿಸಬಲ್ಲ. ಮನುಷ್ಯನ ಸಂಪರ್ಕದಿಂದ ಪೂರ್ವ ಕಾಲದ ಸ್ವಚ್ಛ-ಶೀತಲ ಗಂಗೆ ಇಂದು ಏನಾಗಿದೆ? ಮಲಿನ ಗಂಗೆಯಾಗಿದೆ. ಆದರೆ, ಮನುಷ್ಯ ಸಮಸ್ತ ವಿಶ್ವವ ಕೆಡಿಸಲಾರ. ಅದು ದಿವ್ಯವಾಗಿದೆ, ನಿಸ್ಸೀಮವಾಗಿದೆ. ಅದನ್ನೇನು ತಿದ್ದುವುದು? ಕೆಟ್ಟುದು ನಿನ್ನ ಮನ, ನಿನ್ನ ತನು.

ಹೀಗೆ ದೂಷಿತವಾದುದು ಮನಸ್ಸು. ಅದು ಉದಕ. ಅದರಲ್ಲಿ ಕಿಚ್ಚು ಹುಟ್ಟಿತು! ಶ್ರೇಷ್ಠರ ಸಂತರ ಮಾತುಗಳಿಂದ ಒಂದಿಷ್ಟು ಕಿಚ್ಚು ಉಂಟಾಯಿತು. ಚಿಂತನದ ವಚನದ ಕಿಚ್ಚು! 'ಉದಕದೊಳಗೆ ಹುಟ್ಟಿದ ಕಿಚ್ಚು ಸುಡುತ್ತಿದ್ದುದ ಕಂಡೆ' ಆ ಜ್ಞಾನ ಕಿಚ್ಚು ಮನಸ್ಸಿನಲ್ಲಿಯ ಮಾಲಿನ್ಯವನ್ನು ಸುಡುತ್ತದೆ. ಗುರು ವಚನದ ಕಿಚ್ಚು ಮನಸ್ಸಿನ ಅಲ್ಪತನವನ್ನೆಲ್ಲಾ ಸುಟ್ಟುಹಾಕುತ್ತದೆ. ಆಗ ಮನಸ್ಸು ಅಮನವಾಗುತ್ತದೆ. ಅತ್ಯಂತ ಪರಿಶುದ್ಧವಾಗುತ್ತದೆ. ಅದು ಮನಸ್ಸೇ ಅಲ್ಲ. ಅಮನ. ಇಂಥ ಅಮನ ಸ್ಥಿತಿ ಬಂದ ಬಳಿಕ ಆ ಅಮನದೊಳಗೆ ಹೊಸ ದೃಷ್ಟಿ ಉಂಟಾಗುತ್ತದೆ. ಸತ್ಯ ದರ್ಶನದ ಶಕ್ತಿ ಉದ್ಭವಿಸುತ್ತದೆ.

'ಗಗನದ ಮೇಲೆ ಮಾಮರನ ಕಂಡೆ' ಆಗ ಆ ದೃಷ್ಟಿಗೆ ಗಗನದ ಮೇಲಿರುವ ಮಾಮರ ಕಾಣಿಸುತ್ತದೆ. ಮಾವಿನ ಮರ, ಬಹಳ ದೊಡ್ಡವೃಕ್ಷ, ಸವಿಯಾದ ಫಲ ಕೊಡುವ ವೃಕ್ಷ. ಈ ಜಗತ್ತು ಮಾಮರ! ಇದು ಎಲ್ಲಿದೆ? ಗಗನದ ಮೇಲೆ! ಇದರ ಬೇರು ಬಯಲಲ್ಲಿ, ಅಂದರೆ ಈ ಜಗತ್ತಿನ ಹಿನ್ನಲೆಯೊಳಗೆ ಗಗನ! ಬಯಲು! ದೇವ-ಬಯಲು. ಅದರ ಅಸ್ತಿತ್ವ-ರಸಹೀರಿ ಈ ಜಗತ್ತು ಬೆಳೆಯುತ್ತ ಇರುವುದನ್ನು ಅಲ್ಲಮಪ್ರಭು ಕಂಡ! 'ಗಗನದ ಮೇಲೆ ಮಾಮರನ ಕಂಡೆ' –ಎನ್ನುತ್ತಾನೆ.

'ಪಕ್ಕೆ ಇಲ್ಲದ ಹಕ್ಕಿ ಬಯಲ ನುಂಗಿತ್ತ ಕಂಡೆ' ಅಹಂ-ಮಮ ಎಂಬ ಭಾವಗಳು ಪಕ್ಕೆಗಳು ಕಳಚಿದವು. ಆಗ ನಿರಹಂ–ನಿರ್ಮಮನಾದ ಜೀವ ಲೌಕಿಕ ಮಂಡಲದಾಚೆ ಅನಂತತೆಯಲ್ಲಿ ಬೆರೆಯುತ್ತಾನೆ, ಮುಕ್ತನಾಗುತ್ತಾನೆ. ಅವನಲ್ಲಿ ಬಯಲು, ಬಯಲಲ್ಲಿ ಅವನು! 'ಬಯಲು ಬಯಲ ನುಂಗಿತ್ತು' ಇಂಥ ಅಮೂಲ್ಯ ವಚನಗಳ ಚಿಂತನೆಯದು ಭಗವಚ್ಚಿಂತನ. ಇಂತಹ ಮಾತುಗಳನ್ನು ನಾವು ಸವಿಯಬೇಕು.

'ನಾನು ಇಂಥವ, ಅಂಥವ' ಎಂಬ ಭಾವವಿದ್ದರೆ ಶುದ್ಧ ಹಾಗೂ ಫಲಕಾರಿ ಚಿಂತನೆಯಾಗದು. ಅದು ವಿಚಾರ ವಾದೀತೇ ಹೊರತು ಅನುಭಾವ ಸವಿವ ಚಿಂತನೆಯಾಗದು.

ಒಂದು ಗಿಡ ಇತ್ತು. ಗಿಡದ ಕೆಳಗೆ ಒಂದು ಝರಿ. ಯಾತ್ರಿಕನಿಗೆ ನೀರಡಿಕೆ ಆಗಿತ್ತು. ನೀರು ಹರಿಯುತ್ತಿತ್ತು. ಬಾಯೊಳಗೆ ಸುಣ್ಣ ಹಾಕಿಕೊಂಡಿದ್ದಾನೆ. ಎಲೆ ಜಗಿದಿದ್ದಾನೆ. ಅದನ್ನು ಉಗುಳದೆ ನೀರು ಕುಡಿದ. ಅದೆಲ್ಲಾ ಸುಣ್ಣದ ನೀರಾಗಿತ್ತು. 'ಕೆಟ್ಟಿದೆ ನೀರು' ಎಂದ! ಆಗ ಝರಿ ಹೇಳಿತು– ಮನುಷ್ಯನೆ, ಹೊಲಸು ನಿನ್ನಲ್ಲಿದೆ; ಉಗುಳು. ಆಗ ತಿಳಿಯುತ್ತದೆ ನಾನು ಹೇಗಿದ್ದೇನೆ'.

ಶರಣರ ಮಾತುಗಳು ಸ್ವಚ್ಛ ಮಧುರ. ಅವುಗಳ ರುಚಿ ಅನುಭವಕ್ಕೆ ಬರಬೇಕಾದರೆ ನಮ್ಮ ಹೃದಯ ಹಸನಾಗಬೇಕು. ನಾವು ಏನೇನೋ ತಿಂದವರು. ಪರಧನ ಪರಸ್ತ್ರೀ ಏನೆಲ್ಲಾ. ದೇಶ–ಕೋಶ ಎಲ್ಲವ ಜಗಿದವರು. ಅದನ್ನೆಲ್ಲಾ ಚೆಲ್ಲಬೇಕು. ಆಗ ವಚನಾಮೃತ!–ಚಿಂತನ. ☆

ವೇದದ ತಿಳಿಯನ್ನು, ತಿಳುವಳಿಕೆಯನ್ನು, ರಸವನ್ನು, ಸಾರವನ್ನು ಒದಗಿಸಿಕೊಡುವುದೇ 'ಉಪನಿಷತ್'
–ಎಸ್. ಸೂರ್ಯಪ್ರಕಾಶ





# 'ಈ ಜನ್ಮ ಬಳಿಕಿಲ್ಲ'

–'ಗುಂಬೀಶಂ' ಪ್ರೊ. ಶಂಕರಗೌಡ ಮ. ಬಿರಾದಾರ *

*'ಉದಯಾಸ್ತ ಮಾನವೆಂಬೆರಡು ಕೊಳಗದಲ್ಲಿ*
*ಆಯುಷ್ಯವೆಂಬ ರಾಶಿ ಅಳೆದು ತೀರದ ಮುನ್ನ*
*ಶಿವನ ನೆನೆಯಿರೆ! ಶಿವನ ನೆನೆಯಿರೆ! ಈ ಜನ್ಮ ಬಳಿಕಿಲ್ಲ*
*ಚೆನ್ನಮಲ್ಲಿಕಾರ್ಜುನ ದೇವರ ದೇವನ ನೆನೆದು*
*ಪಂಚಮಹಾಪಾತಕರೆಲ್ಲರು ಮುಕ್ತಿವಡೆದರಂದು'*

–ಅಕ್ಕಮಹಾದೇವಿ

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಹುಟ್ಟುಹಾಕಿದ ಸರ್ವಸಮಾನತೆಯ ಮಾನವ ಧರ್ಮದಲ್ಲಿ ಮಹಿಳೆಗೆ ಸಿಕ್ಕ ಅವಕಾಶ ಅಷ್ಟಿಷ್ಟಲ್ಲ. ಆದ್ದರಿಂದ ಮಹಿಳೆಯರು ತಾವು ಪಡೆದ ಪುರುಷ ಸಮಾನ ಸದಾವಕಾಶಗಳಲ್ಲಿ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ನಿಜತ್ವವನ್ನು ಪ್ರಕಾಶಿಸಿದರು. ಶತಶತಮಾನಗಳಿಂದ ಧಾರ್ಮಿಕ, ಶೈಕ್ಷಣಿಕ, ರಾಜಕೀಯ, ಸಾಮಾಜಿಕ, ಸಾಹಿತ್ಯಕ ಇತ್ಯಾದಿ ಸರ್ವಕ್ಷೇತ್ರಗಳಲ್ಲಿ ತುಳಿತಕ್ಕೊಳಗಾದ ಮಹಿಳೆಗೆ ಬಸವಾದಿ ಶರಣರಿಂದ ಸ್ವಾತಂತ್ರ್ಯದ ಸೂರ್ಯೋದಯವಾಯಿತು. ಪುರಾತನ ಕಾಲದಿಂದಲೂ ಸಾಹಿತ್ಯ ರಚನೆ ಕೇವಲ ಪುರುಷರ ಮೂಲಭೂತ ಹಕ್ಕಾಗಿತ್ತು. ಆತ್ಮಚಿಂತನದ ಆಧ್ಯಾತ್ಮ ವಿದ್ಯೆಯಂತೂ ಮಹಿಳೆಯರಿಗೆ ಭೂ–ಆಕಾಶದಷ್ಟು ಅಂತರವನ್ನು ನಿರ್ಮಾಣ ಮಾಡಿತ್ತು. ಆ ಪಕ್ಷಪಾತ ಕಲ್ಪನೆಯನ್ನು ಹನ್ನೆರಡನೆಯ ಶತಮಾನದ ಎಲ್ಲ ಆ ಶರಣೆಯರು ಸುಳ್ಳಾಗಿಸಿದರು.

ಧರ್ಮ ಮತ್ತು ಸಾಹಿತ್ಯ ಕ್ಷೇತ್ರದಿಂದ ಸಂಪೂರ್ಣವಾಗಿ ವಂಚಿತಳಾಗಿದ್ದ ಮಹಿಳೆ ಬಸವಾದಿ ಶರಣರ ಅನುಭಾವದ ಸತ್ಸಂಗದಲ್ಲಿ ತನ್ನ ತಾನರಿತು ಸಮಾನ ವೇದಿಕೆಯ ಮೇಲೆ ಸಮಾವೇಶಗೊಂಡಳು. ಈ ಸಮಾವೇಶದಲ್ಲಿ ಸಮಾವೇಶಗೊಂಡ ಶರಣೆಯರೆಲ್ಲ ನಡೆದಂತೆ ನಡೆದು, ನುಡಿದಂತೆ ನಡೆದು ಆತ್ಮಾವಲೋಕತೆಯಲ್ಲಿ ಅನುಭವಿಸಿದ ನಿತ್ಯಜ್ಞಾನಾನಂದದ ಅನುಭವಗಳನ್ನು ತಮ್ಮ ತಮ್ಮ ವಚನಗಳ ಮಾಧ್ಯಮದ ಮೂಲಕ ಸಮರ್ಥವಾಗಿ ಅಭಿವ್ಯಕ್ತಗೊಳಿಸಿದರು. ಸರಿಯಾದ ಅವಕಾಶ ಲಭಿಸಿದರೆ ಪ್ರತಿಒಂದು ಕ್ಷೇತ್ರದಲ್ಲೂ ಮಹಿಳೆಯರು ಕೂಡ ತಮ್ಮ ಪೌರುಷವನ್ನು ಮೆರೆಯಬಲ್ಲರೆಂಬುದನ್ನು ಮನಗಾಣಿಸಿದರು. ಉತ್ಕೃಷ್ಟ ಸಾಹಿತ್ಯವನ್ನು ರಚಿಸಬಲ್ಲಳೆಂಬುದನ್ನು ತಮ್ಮ ವಚನ ರಚನೆಯಲ್ಲಿ, ತ್ರಿವಿಧಿಗಳಲ್ಲಿ, ತತ್ವಪದಗಳಲ್ಲಿ ಇನ್ನಿತರ ಹಾಡುಗಳಲ್ಲಿ ತೋರಿಸಿಕೊಟ್ಟಿದ್ದಾಳೆ. ಹಿಂದೆಂದೂ ಕಾಣದ, ಕಲ್ಪಿಸದ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಹನ್ನೆರಡನೆಯ ಶತಮಾನದಲ್ಲಿ ವಚನಗಳನ್ನು ರಚಿಸಿ ತೋರಿಸಿದ್ದಾರೆ. ಆಚಾರ, ವಿಚಾರ, ನೀತಿ, ಧರ್ಮ, ಸಂಸ್ಕೃತಿ, ಆಧ್ಯಾತ್ಮಿಕ ಇತ್ಯಾದಿ ಮಾನವೀಯತೆಯ ಪ್ರಕ್ರಿಯೆಗಳನ್ನು ಬೆಳಗುವಲ್ಲಿ ಜಾಗತಿಕ ಸಾಹಿತ್ಯದ ಇತಿಹಾಸದಲ್ಲಿಯೇ ಅಪೂರ್ವವೆನ್ನುವ ಮಹಾಕೃತಿಗಳಿಗೆ ಭಾಜನರಾಗಿದ್ದಾರೆ. ಅಂಥ ಕವಿಯತ್ರಿಯರಲ್ಲಿ, ವಚನಗಾರ್ತಿಯರಲ್ಲಿ ವೀರ ವಿರಾಗಿಣಿ, ವೈರಾಗ್ಯಮೂರ್ತಿ, ನಿತ್ಯನಿರವಯಿ ಅಕ್ಕಮಹಾದೇವಿಯ ಘನತೆ ಹಿರಿದಾಗಿದೆ.

'ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ' ಎಂಬ ಪ್ರಸ್ತುತ ವಚನದಲ್ಲಿ ಅಕ್ಕಮಹಾದೇವಿಯು ಜೀವಿಯ ಜನನ ಮರಣಗಳ ಮಧ್ಯದ ಅವಧಿಯನ್ನು ನೆನಪಿಸಿಕೊಟ್ಟಿದ್ದಾಳೆ. ಜಗದಲ್ಲಿ ನಿರ್ಮಾಣವಾದ ಚೇತನ–ಅಚೇತನ ಎಲ್ಲ ವಸ್ತುಗಳಿಗೂ ಅದರದೇಯಾದ ಆಯುಷ್ಯವಿದೆ. ಕಾಲಮಾನದ ಮಿತಿ ಇದೆ. ಅದರಂತೆ ಮನುಷ್ಯನಿಗೂ ಆಯುಷ್ಯದ ಮಿತಿ ಇದೆ. ಆದರೆ ಎಲ್ಲರೂ ಸಮಾನ ವಯಸ್ಸಿನವರೆಗೆ ಬದುಕಿ ಬಾಳುವುದಿಲ್ಲ. ಯಾರು ೫೦, ೬೦, ೭೦, ೮೦, ೯೦, ೧೦೦ ಹೀಗೆ ಬದುಕಿ ಬಾಳುತ್ತಾರೆ. ಆದರೆ ಆ ಎಲ್ಲಾ ಕಾಲವನ್ನು ಯಾವುದಕ್ಕಾಗಿ ಬಳಸಿಕೊಳ್ಳುತ್ತಾರೆ. ೧೦೦ ವರ್ಷ ಬಾಳಿದರೂ ಏನನ್ನೂ ಸಾಧಿಸಿದ್ದಾರೆ, ಏನನ್ನು

* ಸಂಚಾಲಕರು, ಶ್ರೀ ಅಟವೀಶ್ವರ ವಿದ್ಯಾರ್ಥಿ ವಸತಿ ನಿಲಯ, ಚಿಕ್ಕತೊಟ್ಲುಕೆರೆ, ಕೋರಾ ಹೋಬಳಿ, ತುಮಕೂರು ತಾಲ್ಲೂಕು.

'ಭಾರತೀಯ ಸಂಸ್ಕೃತಿ ಆತ್ಮೀಯವಾದದ್ದು' –ನವರತ್ನರಾಮರಾವ್

ಅರಿತಿದ್ದಾರೆ. ತಮ್ಮನ್ನು ತಾವು ಅರಿತವರೆಷ್ಟು? ಶ್ರೇಷ್ಠವಾದ ಈ ಮಾನವ ಜನ್ಮವನ್ನು ಸಾರ್ಥಕಪಡಿಸಿಕೊಂಡವರೆಷ್ಟು? ಜೀವಂತ ಇರುವಾಗಲೇ ದೇವರಾಗಿ ಮರಣದ ನಂತರ ದೇವತ್ವ ಉಳಿಸಿಕೊಂಡವರೆಷ್ಟು? ಪ್ರಪಂಚದ ಕ್ಷಣಿಕ ಸುಖಕ್ಕಾಗಿ ಸಾಗರದಷ್ಟು ದುಃಖಪಡುತ್ತಾ, ಎಲ್ಲಿಲ್ಲದ ಭ್ರಮೆಯಿಂದ ಜೀವಂತವಿರುವಾಗಲೂ ಭೂತವಾಗಿ, ಮರಣದ ನಂತರವೂ ಪಿಶಾಚಿಯಾಗಿ ಮತ್ತೊಬ್ಬರಿಗೆ ಕಂಟಕವಾದವರೇ ಹೆಚ್ಚು. ನಾನಾರು? ನಾನೇನಾಗಬೇಕು? ಏನನ್ನು ಸಾಧಿಸಬೇಕು? ನನ್ನ ಪ್ರಯಾಣ ನಿಮಿಷ ನಿಮಿಷಕ್ಕೆ ಯಾವಕಡೆ ನಡೆದಿದೆ? ನನ್ನಲ್ಲಿರುವ ಪರವಸ್ತು ಯಾವುದೆಂಬುದನ್ನು ಕ್ಷಣಮಾತ್ರವೂ ವಿಚಾರಿಸದೆ ವ್ಯರ್ಥವಾಗುತ್ತಿದ್ದಾರೆ. ಮಾನವರ ಈ ವ್ಯರ್ಥತೆಯನ್ನು ಕಂಡು ಮರುಗಿದ ಅಕ್ಕಮಹಾದೇವಿಯು ಈ ವಚನದ ಮೂಲಕ ಜನರನ್ನು ಜಾಗ್ರತಗೊಳಿಸಿದ್ದಾಳೆ.

ಭಗವಂತನು ಮಾನವನ ಆಯುಷ್ಯವೆಂಬ ರಾಶಿಯನ್ನು ಸೂರ್ಯೋದಯ ಮತ್ತು ಸೂರ್ಯಾಸ್ತವೆಂಬ ಎರಡು ಕೊಳಗದಿಂದ ಅಂದರೆ, ದಿವಸಗಳಂತೆ ಅಳತೆಯ ಮಾಪಿನಿಂದ ಅಳೆಯುತ್ತಾನೆ. ಈ ಆಯುಷ್ಯ ತೀರುವ ಮುನ್ನವೇ ಶಿವನನ್ನು ನೆನೆಯಬೇಕು. ಅಂದರೆ ತಾನಾರು, ತನ್ನಲ್ಲಿರುವ ಆತ್ಮ ಯಾರ ಸ್ವರೂಪ, ಅದರ ಘನತೆ ಎಂತಹುದು, ಆ ಘನತೆಗೆ ಕಾರಣವಾದ ಮಹಾಘನವಸ್ತು ಯಾವುದೆಂಬುದನ್ನು ಅರಿಯಬೇಕು. ಏಕೆಂದರೆ ಈ ಶ್ರೇಷ್ಠ ಮತ್ತು ಪವಿತ್ರವಾದ ಮಾನವಜನ್ಮ ಪುನಃ ಉದಿಸಿ ಬರುವುದೆಂಬ ನಿಶ್ಚಯವಿಲ್ಲ. ಆದ್ದರಿಂದ ಆ ಪರವಸ್ತುವಾದ ಚೆನ್ನಮಲ್ಲಿಕಾರ್ಜುನ ದೇವರನ್ನು ಧ್ಯಾನಿಸಿದರೆ ಅಂದರೆ ಕ್ರಿಯಾಜ್ಞಾನದಿಂದ ನಡೆದರೆ ಪಂಚ ಮಹಾಪಾಪಗಳನ್ನು ಮಾಡಿದವರಿಗೂ ಕೂಡ ಮುಕ್ತಿ ಲಭಿಸುವುದು. ಪ್ರಾರಂಭದಲ್ಲಿ ಅಜ್ಞಾನತನದಿಂದ ಅನೇಕ ಇಲ್ಲದ ಕಾರ್ಯಗಳನ್ನು ಮಾಡಿದವರೆಷ್ಟೋ ಜನ, ನಂತರ ಅರಿವಾಗಿ ಪಶ್ಚಾತ್ತಾಪ ಪಟ್ಟು ಸನ್ಮಾರ್ಗದಿಂದ ನಡೆದು ಮುಕ್ತಿ ಪಡೆದವರುಂಟು. ಉದಾಹರಣೆಗೆ : ಸಾನಂದಮುನಿಯು ನಾರಕಿಗಳನ್ನು ಉದ್ಧರಿಸಿದ ನಾರದ ಮುನಿಗಳು ವಾಲ್ಮೀಕಿಯನ್ನಾಗಿಸಲಿಲ್ಲವೆ? ಬುದ್ಧದೇವ ಅಂಗುಲಿಮಾಲನನ್ನು ಮುಕ್ತಗೊಳಿಸಿದ, ಬಸವಣ್ಣನವರ ಧರ್ಮಕಮ್ಮಟದಲ್ಲಿ ಅಸಂಖ್ಯಾತರು ಶರಣಾದರು.

ಬಸವಣ್ಣನವರು ಕೂಡ ಅಂತ್ಯಜರಿಂದ ಹಾರುವರವರೆಗೆ, ಕಿರುಮನೆಯಿಂದ ಅರಮನೆಯವರೆಗೆ, ಗುಡಿಸಲದಿಂದ ಗುರುಮನೆಯವರೆಗೆ, ಬಡವರಿಂದ ಬಲ್ಲಿದವರೆಗೆ ಯಾವುದೇ ಜಾತಿ, ಮತ, ಪಂಥ, ಧರ್ಮ, ಲಿಂಗಭೇದವಿಲ್ಲದೆ ಎಲ್ಲರನ್ನೂ ಎಚ್ಚರಿಸುವುದಾಗಿ ಹೀಗೆ ವಚನಿಸಿದ್ದುಂಟು,

*'ಹೊತ್ತಾರೆ ಎದ್ದು, ಅಗ್ಘವಣಿ ಪತ್ರೆಯ ತಂದು*
*ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ*
*ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?*
*ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದಮುನ್ನ*
*ತೊತ್ತುಗೆಲಸವ ಮಾಡು ಕೂಡಲಸಂಗಮದೇವನ'*

ಈ ವಚನದಲ್ಲಿ ಬರುವ 'ಹೊತ್ತಾರೆ ಎದ್ದು' ಎಂದರೆ ಸೂರ್ಯೋದಯಕ್ಕಿಂತ ಮುಂಚಿತ ನಸುಕಿನಲ್ಲಿ ಎಂದಲ್ಲ 'ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು' ಎಂದರೆ ಯಾವುದೇ ಬಂಧುಬಳಗವಲ್ಲ. ಏಕೆಂದರೆ ಗಂಡನಿಗೆ ಹೆಂಡತಿ, ಹೆಂಡತಿಗೆ ಗಂಡ, ಮಕ್ಕಳು, ಮೊಮ್ಮಕ್ಕಳು ಇನ್ನಿತರ ಬಂಧು-ಬಳಗ ಯಾರೂ ನಮ್ಮವರಲ್ಲ. ಅವರಾರೂ ನಮ್ಮೊಡನೆ ಜನಿಸಿಲ್ಲ, ನಮ್ಮೊಡನೆ ಮರಣ ಹೊಂದುವುದಿಲ್ಲ. ಅವರಾರೂ ನಮ್ಮ ಅಂಗದ ಅವಿಭಾಜ್ಯ ಅಂಗಗಳಲ್ಲ. ಅಂದರೆ ನಮ್ಮವರಾರು? ನಮ್ಮ ನಮ್ಮ ಶರೀರದೊಡನೆ, ಶರೀರದ ಅವಿಭಾಜ್ಯ ಅಂಗಗಳಾಗಿ ರೂಪತಾಳಿ ಬಂದ ನಮ್ಮ ಅವಯವಗಳು. ಅವು ಮುಪ್ಪಾಗದ ಮುನ್ನ, ಶಕ್ತಿಹೀನವಾಗುವ ಮುನ್ನ ಎದ್ದೇಳು. ಅಂದರೆ ಆಯುಷ್ಯ ಕಳೆದು ಮುಪ್ಪಾಗುವ ಮುನ್ನ ಅಜ್ಞಾನದ ನಿದ್ರೆಯಿಂದ ಎದ್ದು ನಾನಾರೆಂಬುದನ್ನು ಅರಿಯಲು ಪ್ರಯತ್ನಿಸು. ಶರೀರದ ಪ್ರತಿಯೊಂದು ಅವಯವಗಳು ಸದೃಢವಾಗಿರುವವರೆಗೆ ಏನನ್ನೂ ಸಾಧಿಸಬಹುದು. ಮುಪ್ಪು ಆವರಿಸಿ, ಕಣ್ಣೂ, ಕಿವಿ, ಕೈಕಾಲು, ನಡ, ಗೋಣು ಇತ್ಯಾದಿಗಳು ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುವ ಶಕ್ತಿ ಕಳೆದುಕೊಂಡ ಮೇಲೆ ಅವುಗಳಾವುವೂ ನಿನಗೆ ಸಹಕಾರ ಮಾಡಲಾರವು. ಆದ್ದರಿಂದ ವಯ ವ್ಯರ್ಥವಾಗಿ ಹೋಗಿ ಮುಪ್ಪಾಗುವ

'ವೇದ' ಎಂಬ ಮಾತಿಗೆ 'ಜ್ಞಾನ' ಎಂದು ಅರ್ಥ - ಎಸ್. ಶಿವರಾಮಶಾಸ್ತ್ರಿ





ಮುನ್ನ ಎಚ್ಚೆತ್ತುಕೊಂಡು ನಿಮ್ಮ ನಿಮ್ಮ ನಿಜಸ್ವರೂಪವನ್ನು ಅರಿತುಕೊಂಡು ನಿತ್ಯ ಸುಖಿಗಳಾಗಿರೆಂಬುದನ್ನು ಬಸವಣ್ಣನವರು ಸ್ಪಷ್ಟವಾಗಿಸಿದ್ದಾರೆ. ಇದೇ ಉದ್ದೇಶ ಮತ್ತು ಅರ್ಥದಲ್ಲಿ ಅಕ್ಕಮಹಾದೇವಿಯು ಕೂಡ 'ಉದಯಾಸ್ತಮಾನವೆಂಬೆರೆಡು ಕೊಳಗದಲ್ಲಿ, ಆಯುಷ್ಯವೆಂಬ ರಾಶಿ ಅಳೆದು ತೀರದ ಮುನ್ನ ಶಿವನ ನೆನೆಯಿರೆ...' ಎಂದದ್ದು. ಜನನ ಮರಣವೆಂಬ ಎರಡು ಕಾಲಮಾನದ ಅಳತೆಯ ಮಾಪಿನಲ್ಲಿ ಅಳೆದು ಆಯುಷ್ಯವೆಂಬ ರಾಶಿ ತೀರದ ಮುನ್ನ ನಿಮ್ಮ ನಿಜತ್ವವನು ನೀವರಿತು, ನಿತ್ಯಜ್ಞಾನದಿಂದ ಪರಮ ಸುಖಿಗಳಾಗಿರೆಂಬುದನ್ನು ಸ್ಪಷ್ಟವಾಗಿಸಿದ್ದಾಳೆ. ಈ ನಿತ್ಯ ಸತ್ಯವನ್ನೇ ಬಸವಣ್ಣನವರು ಮತ್ತೊಂದು ಈ ರೀತಿ ಹೀಗೆ ಹೇಳಿದ್ದುಂಟು,

'ನೆರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ
ಮೃತ್ಯು ಮುಟ್ಟದ ಮುನ್ನ
ಪೂಜಿಸು ಕೂಡಲಸಂಗಮದೇವನ'

ಬಸವಣ್ಣನವರ 'ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ...' ಮತ್ತು 'ನೆರೆ ಕೆನ್ನೆಗೆ, ತೆರೆಗಲ್ಲದೆ ಶರೀರ ಗೂಡು ವೋಗದ ಮುನ್ನ...' ಈ ಎರಡೂ ವಚನಗಳ ಭಾವ ಮತ್ತು ಉದ್ದೇಶಗಳು ಅಕ್ಕಮಹಾದೇವಿ ಹೇಳಿದ 'ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ' ಈ ವಚನದ ಉದ್ದೇಶ ಮತ್ತು ಭಾವಕ್ಕೆ ಸಮನಾಗಿವೆ. ಈ ಮೂರೂ ವಚನಗಳಲ್ಲಿ ಹೇಳುವ ಪರಿ ಬೇರೆ ಬೇರೆಯಾಗಿದ್ದರೂ ಅಜ್ಞರನ್ನು ಎಚ್ಚರಿಸಿ ಸುಜ್ಞಾನದ ಬೆಳಗು ತೋರಿ, ಅವರ ನಿಜದರಿವನ್ನು ಅವರಿಗೆ ಮಾಡಿಸಿ, ಮಾನವ ಜನ್ಮದ ಸಾರ್ಥಕತೆಯನ್ನು ಮಾಡಿಸುವವುಗಳಾಗಿವೆ. ನಿಜಾತ್ಮ ದರ್ಶನದಿಂದ ನಿತ್ಯಮುಕ್ತತೆಯನ್ನು ಬೆಳಗಿಸುವವುಗಳಾಗಿವೆ.

ಬಸವಣ್ಣನವರಂತೆ ಅಕ್ಕಮಹಾದೇವಿಯು ಕೂಡ ಸಾಮಾನ್ಯ ಜನರ ಮೂಢತೆ ಮತ್ತು ಅಜ್ಞತೆಯ ಬಗೆಗೆ ಮರುಕಪಟ್ಟು, ಅವರನ್ನು ಅವರವರ ನಿಜಪ್ರಕಾಶದತ್ತ ಕರೆತರುವ ಮಹೋನ್ನತ ಉದ್ದೇಶ ಹೊಂದಿದ್ದರೆಂಬುದು ಈ ವಚನದಿಂದ ಸ್ಪಷ್ಟವಾಗುತ್ತದೆ. ಅಜ್ಞರ ಬಗೆಗೆ ಅವರಲ್ಲಿರುವ ಹೃದಯಸ್ಪಂದನೆ ಎಷ್ಟಿತ್ತೆಂಬುದು ಮತ್ತು ನಿರ್ಮಲಪ್ರೀತಿ ಹೇಗಿತ್ತೆಂಬುದರಲ್ಲಿ ಅರ್ಥವಾಗುತ್ತಿದೆ. ವಿಶ್ವವ್ಯಾಪಿ ಹೃದಯಿಗಳಿಂದ, ಪ್ರಾಣಿದಯಿಗಳಿಂದ, ನಿಸ್ವಾರ್ಥ ಕ್ರಿಯೆಗಳಿಂದ, ಸರ್ವರುದ್ಧಾರದ ಸದ್ಭಾವಿಗಳಿಂದ ಮಾತ್ರ ಇಂಥ ಮಾತು ಮತ್ತು ಕ್ರಿಯೆಗಳು ನಡೆಯುತ್ತವೆ. ಅಂಥವರಲ್ಲಿ ಅಕ್ಕಮಹಾದೇವಿಯೂ ಪ್ರಮುಖಳೆಂದು ಸಾರಿ ಸಾರಿ ಹೇಳಬಹುದು.

☆

ಸಂಸಾರವೆಂಬ ಸಾಗರಕ್ಕೆ ಒಡಲೆಂಬುದೊಂದು ಬ್ಯೈತ್ರ ಕಂಡಾ.
ಪುಣ್ಯಪಾಪವೆಂಬ ಭಂಡವನೆ ತುಂಬಿ
ಪಂಚ ಪಂಚೈವರು ಏರಿದರು.
ಜ್ಞಾನವೆಂಬ ಕೂಕಂಬಿಯ
ಲಿಂಗವೆಂಬ ತಾರಾಮಂಡಲವ ನೋಡಿ ನಡೆಸೂದು.
ಜವನ ಕಳ್ಳಾಳು ಕರ ಹಿಡಿದು ಕಂಡಾ.
ಪುಣ್ಯಪಾಪವೆಂಬ ಭಂಡವ ಸ್ಥಮಜೋಗವೆಂಬ ನೇಣ
ನವನಾಳದಲಿ ಕಟ್ಟಿ,
ಮನವೆಂಬ ಉಪಾಯವನು ವಾಹಿಕೊಳಲಿ
ನಿಧಿಯೆಂಬ ನಡುಗಡಲ ಸುಖದುಃಖದೊಳಗೆ
ತೆರೆಯ ಹೊಯಿಲು ಕರ ಹಿಡಿದು ಕಂಡಾ!
ಉದುಮದವೆಂಬಾ ಸುಳಿಯಲ್ಲಿ ತಿರುಗದೆ
ಗುರುವೆಂಬ ಬೆಂಗುಂಡ ಹಿಡಿ ಕಂಡಾ.
ಇಹಲೋಕ ಪರಲೋಕ ವಿಘ್ನಗಳ ಕಳೆದು
ಕಪಿಲಸಿದ್ಧಮಲ್ಲಿನಾಥನ ಕಾಬೆ ಕಂಡಾ.
-ಸಿದ್ಧರಾಮೇಶ್ವರ

ವೇದ ಸಾಹಿತ್ಯದ ಸತತಾಭ್ಯಾಸ ಮತ್ತು ಅನುಷ್ಠಾನಾಗಳಲ್ಲಿ ತೊಡಗಿ ಆತ್ಮಾನುಸಂಧಾನದಲ್ಲಿ ತನ್ಮಯರಾದ ಋಷಿಮುನಿಗಳ ದಿವ್ಯೋಪದೇಶಗಳು ಪರಂಪರೆಯಿಂದ ಶಿಷ್ಯ ಪ್ರಶಿಷ್ಯರಿಗೆ ಶ್ರವಣಮುಖದಿಂದ ಬೋಧಿಸುತ್ತ ಬಂದುದರಿಂದ 'ಶ್ರುತಿ'ಗಳೆಂಬ ಹೆಸರು. - ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ

# ಮಹಿಳಾ ಸಬಲೀಕರಣ ಸಬಲೀಕರಣಗೊಳಿಸಿದ ಬಸವಣ್ಣನವರ ನಡೆ-ನುಡಿಗಳು' -ಕಳೆದ ಸಂಚಿಕೆಯಿಂದ

-ಸ.ರಾ. ಸುಳಕೂಡೆ *

**ಸಂಸಾರದೊಳಗೆ ಸಾಮರಸ್ಯ ತಂದುಕೊಳ್ಳುವುದೇ ಮಹಿಳಾ ಸಬಲೀಕರಣ :**

ಗಂಡು-ಹೆಣ್ಣುಗಳ ಮೇಲುಕೀಳಿನ ಕಸರತ್ತು ಮಹಿಳಾ ಸಬಲೀಕರಣದ ಪರಮಶತ್ರುವಾಗಿದೆಯೆಂಬ ಅಂಶವನ್ನು ತಳಸ್ಪರ್ಶಿಯಾಗಿ ಅಭ್ಯಸಿಸಿದ ಬಸವಣ್ಣನವರು ಸಾಮರಸ್ಯ ದಾಂಪತ್ಯವೇ ಬದುಕಿನ ಶ್ರೇಷ್ಠತೆ ಎಂದು ತೋರಿಸಿಕೊಟ್ಟಿದ್ದಾರೆ. ಸತಿ-ಪತಿಗಳೊಂದಾದ ಭಕ್ತಿಯು ಸಮಾನತೆಯನ್ನು ಸಹಜಗೊಳಿಸುವುದೆಂಬ ಅನುಭಾವವನ್ನು ಸಾದರಗೊಳಿಸಿದ ಬಸವಣ್ಣನವರು ಒಬ್ಬರನ್ನೊಬ್ಬರು ಅರಿತು ಬಾಳುವುದಕ್ಕೆ ಪ್ರೋತ್ಸಾಹ ನೀಡಿದರು.

ಬಸವಣ್ಣನವರು ರೂಢಿಗತವಾಗಿದ್ದ ಪುರುಷ ಪ್ರಧಾನ ನಿರ್ಣಯಗಳೇ ಅಂತಿಮವೆಂಬ ಧೋರಣೆಯನ್ನು ಪಲ್ಲಟಗೊಳಿಸಿದರು. ಬದುಕಿನೊಳಗೆ ಬರುವ ಎಡರು-ತೊಡರುಗಳನ್ನು ಸಮವಾಗಿ ಚಿಂತನಗೈದು ಎದುರಿಸುವ ಮನೋಭಾವಕ್ಕೆ ಸ್ಪಂದಿಸುವಂತೆ ಮಾಡಿದ ಬಸವಣ್ಣನವರು ಪತಿಯ ಗುಣವ ಸತಿಯು, ಸತಿಯ ಗುಣವನ್ನು ಪತಿಯು ಅರಿತುಕೊಳ್ಳುವಲ್ಲಿ ಸನ್ನದ್ಧರಾಗುವಂತೆ ನೋಡಿಕೊಂಡರು.

ಸತಿ-ಪತಿಗಳು ಸತ್ಯಶುದ್ಧ ಕಾಯಕದೊಳಗೆ ನಿರತಗೊಳ್ಳುವಂತೆ ಸ್ವಾವಲಂಬಿ ಬದುಕನ್ನು ರೂಪಿಸಿದ ಬಸವಣ್ಣನವರು ಅನ್ಯೋನ್ಯ ಬದುಕಿನೊಳಗೆ ಸಕಲ ಸಂಪತ್ತು ಸಮಾಧಾನವಿದೆ ಎಂದು ನಿಶ್ಚಯಿಸಿ ತೋರಿಸಿದರು. ಗಂಡ-ಹೆಂಡತಿ ತಮ್ಮ ತಮ್ಮ ವ್ಯಕ್ತಿತ್ವ ರೂಪಿಸಿಕೊಂಡು ಬದುಕಿದ ಸನ್ನಿವೇಶ ಬಸವಣ್ಣನವರ ಶರಣ ಸಂಸ್ಕೃತಿಯೊಳಗೆ ಮಾತ್ರ ದಿಟಗೊಂಡು ನಿಂತಿದೆ. ವ್ಯಕ್ತಿತ್ವವು ಸರಳ ಸಜ್ಜನಿಕೆಯೊಂದಿಗೆ, ಆಸೆ-ಆಮಿಷ-ತಾಮಸಗಳಿಂದ ಅತೀತವಾಗಿರುವಂತೆ ನೋಡಿಕೊಂಡಿದ್ದ ಶರಣ ದಂಪತಿಗಳು, ಸಮರಸದಿಂದ ಬಾಳುವ ದಾರಿಯನ್ನು ನಮಗೆಲ್ಲಾ ತೋರಿಸಿದ್ದಾರೆ. ದಾರಿಯೊಳಗೆ ಬಂಗಾರ ಬಿದ್ದರೂ ಕೈಮುಟ್ಟಿ ನೋಡದಂತೆ ಸಂಯಮತನವನ್ನು ಬೆಳೆಸಿಕೊಂಡಿದ್ದ ಶರಣ ದಂಪತಿಗಳು ಸತ್ಯ ಶುದ್ಧ ಕಾಯಕದ ಪ್ರತಿಫಲಗಳಿಂದಲೇ ಸಂತುಷ್ಟರಾಗಿದ್ದರು. ಅವರು ನಡೆಸಿದ ಬದುಕಿನ ಕ್ರಮದೊಳಗೆ ಮಹಿಳಾ ಸಬಲೀಕರಣದ ತತ್ವ ಸಾರವಡಗಿದೆ.

**ಅನುಭವ ಮಂಟಪದ ಮೂಲಕ ಮಹಿಳಾ ಸಬಲೀಕರಣಕ್ಕೆ ಮಾನ್ಯತೆ :**

ಅಲ್ಲಮಪ್ರಭುವಿನ ಘನ ಅಧ್ಯಕ್ಷತೆಯಲ್ಲಿ ಬದುಕಿನ ಮಹತ್ತರ ಚರ್ಚೆಯೊಳಗೆ ಮನ ತೆರೆದು ಮಾತಾಡಿದ ಮಹಿಳೆಯರು ಮನುಕುಲದ ಇತಿಹಾಸದೊಳಗೆ ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲೂ ಪಾಲು ಪಡೆದುಕೊಂಡಿದ್ದು ಅಭಿಮಾನದ ಸಂಗತಿ. ಅನುಭವ ಮಂಟಪದೊಳಗೆ ಕಾಯಕ, ದಾಸೋಹ ಸತ್ಸಂಗ, ಸಜ್ಜನಿಕೆಯ ನಿಷ್ಠೆಯ ಚರ್ಚೆಗಳಲ್ಲಿ ಭಾಗವಹಿಸಿದ ಮಹಿಳೆಯರು ಮಹಿಳೆ ಎಂಬ ಅಬಲತೆಯನ್ನು ಕಳೆದುಕೊಂಡರಲ್ಲದೆ, 'ಹೆಣ್ಣು ಮಾಯೆ' ಎಂಬ ಕಳಂಕದಿಂದಲೂ ದಾಸ್ಯತನದಿಂದಲೂ, ಮೂಕತನದಿಂದಲೂ ಮುಕ್ತರಾದರು. ಅಲ್ಲಮಪ್ರಭುದೇವರು 'ಹೆಣ್ಣು ಮಾಯೆಯಲ್ಲ' ಎಂಬ ಅಂಶವನ್ನು ವಚನಾಮೃತದೊಳಗೆ ವ್ಯಕ್ತಗೊಳಿಸಿದ್ದು ಹೇಗಿದೆ;

*ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ*
*ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ*
*ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ*
*ಮನದ ಮುಂದಣ ಆಸೆಯೆ ಮಾಯೆ ಕಾಣಾ ಗುಹೇಶ್ವರ*

ಅನುಭವ ಮಂಟಪದೊಳಗೆ 'ಮಹಾದೇವಿಯಕ್ಕ' ಮಂಡಿಸಿದ ಆಚಾರ-ವಿಚಾರಗಳು ಮಹಿಳಾ ಸಬಲೀಕರಣದ ಉನ್ನತ ಶ್ರೇಣಿಯ ಸಾಧನೆಯ ಉತ್ತುಂಗಗಳೇ ಎಂದು ಹೇಳಬಹುದಾಗಿದೆ. ಜಗತ್ತಿನ ಇತಿಹಾಸದೊಳಗೆ ಹೆಣ್ಣಿನ ಭಾವವನ್ನು ಕಿತ್ತೊಗೆದು, ಜಗತ್ತಿನ ಆಸೆ ಆಕಾಂಕ್ಷೆಗಳಿಗೆ ಉದಾತ್ತ ಉಡುಗೆ-ತೊಡುಗೆ ತೊಡಸಿ, ಬದುಕಿನ ಮಹತ್ತಮ ಗುರಿಯನ್ನು ತಲುಪಿದ ಮಹದೇವಿಯಕ್ಕನ ಜೀವನ ವೃತ್ತಾಂತವು ಮಹಿಳಾ ಸಬಲೀಕರಣಕ್ಕೊಂದು ದಿವ್ಯ ನಿದರ್ಶನವೇ ಆಗಿದೆ. ಅನುಭವ ಮಂಟಪದ ಎಲ್ಲ ಶರಣರೊಳಗೆ ಹಿರಿಯ ಪಟ್ಟ ಪಡೆದುಕೊಂಡ ಅಕ್ಕನ ಬದುಕಿನ ಇನ್ನೊಂದು ಮುಖವೇ ಅನುಭವ ಮಂಟಪದ ಮಹಿಳಾ ಅಭಿವ್ಯಕ್ತಿ ಸ್ವಾತಂತ್ರ್ಯದ ತಿರುಳಾಗಿದೆ, ನೀತಿಯೂ ಆಗಿದೆ.

**ಉಪಸಂಹಾರ :**

ಬಸವಣ್ಣನವರು ಸ್ತ್ರೀ ಸ್ವಾತಂತ್ರ್ಯಕ್ಕೆ ಸಾಮಾಜಿಕ ಮನ್ನಣೆ ಸಿಗುವಂತೆ ಮಾಡುವುದರ ಜೊತೆಗೆ ಕಾಯಕವೇ ಕೈಲಾಸ ಎಂಬ ಧೋರಣೆಯನ್ನು ಚಾಲ್ತಿಗೆ ತರುವ ಮೂಲಕ ಸ್ವಾವಲಂಬನೆಗೂ ನಾಂದಿ ಹಾಡಿದರು. ಸಾಮಾಜಿಕ ಭದ್ರತೆಯೊಂದಿಗೆ ಸಾಮರಸ್ಯ ದಾಂಪತ್ಯದ ಮಹಿಳಾ ಸಬಲೀಕರಣವನ್ನು ಉತ್ತುಂಗಕ್ಕೆ ಒಯ್ದ ಬಸವಣ್ಣನವರು ಮನುಕುಲದ ಸರ್ವಾಂಗೀಣ ಒಳಿತು ಹೆಣ್ಣು-ಗಂಡು ಅರಿತು ಬಾಳುವುದರಲ್ಲಿ ಅಡಕಗೊಂಡಿರುವುದನ್ನು ಸಾರ್ವತ್ರಿಕಗೊಳಿಸಿದರು. ಮಾನವೀಯ ಮೌಲ್ಯಗಳೆ ಮಾನವ ಬದುಕಿನ ಸರ್ವಸ್ವವೆಂಬ ನಂಬಿಕೆಯನ್ನು ದೃಢವಾಗಿ ನಂಬುವಂತೆ ಮಾಡಿದ ಬಸವಣ್ಣನವರು ಸಂತಸದ ಸಹಜೀವನದ ರೂವಾರಿಗಳಾಗಿ ನಿಂತಿದ್ದಾರೆ. ಅವರು ಕಟ್ಟಿ ತೋರಿಸಿದ ಸಮಾಜ ಬದುಕಿನೊಳಗೆ ಮೂಢಾಚಾರಗಳು, ಡಂಭಾಚಾರಗಳು, ಅನಾಚಾರಗಳು, ಅತ್ಯಾಚಾರಗಳು, ತಿಕ್ಕಾಟಗಳು, ಆಕ್ರಮಣಗಳು, ಅನಾದರಗಳು, ಅವ್ಯವಹಾರಗಳು, ಸುಳ್ಳು-ಕಳವುಗಳಿಗೆ ಆಸ್ಪದವೇ ಇಲ್ಲ. ಎಲ್ಲರೂ ಸರಳರಾಗಿ, ಸಜ್ಜನರಾಗಿ, ಸ್ವಾವಲಂಬಿಗಳಾಗಿ, ದಾಸೋಹಿಗಳಾಗಿ, ಹೊರಹೊಮ್ಮುವಂತೆ ಮಾಡಿದ ಬಸವಣ್ಣನವರ ತತ್ವಗಳು ಮಹಿಳಾ ಸಬಲೀಕರಣದ ಪ್ರಯೋಗಗಳೇ ಆಗಿವೆ. ಆದರೆ ಇಂದಿಗೂ ಆ ತತ್ವಗಳಲ್ಲಿ ನಂಬಿಕೆಯನ್ನಿಟ್ಟುಕೊಂಡು ಬದುಕುವ ವಿಧಾನ ಪ್ರಾಶಸ್ತ್ಯ ಪಡೆದಿಲ್ಲ. ಅದಕ್ಕಾಗಿಯೇ ಅವರು ಹೇಳಿದ್ದು ಹೀಗಿದೆ;

*ಒಲೆ ಹತ್ತಿಯುರಿದೊಡೆ ನಿಲಬಹುದಲ್ಲದೆ,*
*ಧರೆ ಹತ್ತಿಯುರಿದಡೆ ನಿಲಬಾರದು.*
*ಏರಿ ನೀರುಣ್ಬೊಡೆ, ಬೇಲಿ ಕೆಯ್ಯ ಮೇವೊಡೆ*
*ನಾರಿ ತನ್ನ ಮನೆಯಲ್ಲಿ ಕಳುವೊಡೆ*
*ತಾಯಿ ಮೊಲೆಹಾಲು ನಂಜಾಗಿ ಕೊಲುವೊಡೆ*
*ಇನ್ನಾರಿಗೆ ದೂರುವೆ, ಕೂಡಲಸಂಗಮದೇವಾ?*

ಜಗತ್ತಿನೊಳಗೆ ಮಾನವೀಯ ಕಳಕಳಿ, ಅಂತಃಕರಣ, ಸೇವೆ, ತ್ಯಾಗ, ಪರಸ್ಪರರಲ್ಲಿ ನಂಬಿಕೆ, ವಿಶ್ವಾಸ, ಅರಿತುಕೊಳ್ಳುವಿಕೆ, ಸಹಾನುಭೂತಿ, ಆದರ, ಗೌರವ ಕೊಡುವ ಮನೋಭಾವದೊಂದಿಗೆ ಇನ್ನೊಬ್ಬರಿಗೆ ಘಾತ ಮಾಡದಂತೆ ಬದುಕುವ ಛಲಗಾರಿಕೆ ಹೆಚ್ಚಿಸಿಕೊಂಡಲ್ಲಿ ಮಾತ್ರ ಮಹಿಳಾ ಸಬಲೀಕರಣ ಸಾಧ್ಯ. ಮಾನವ ಹಕ್ಕುಗಳು, ಮಹಿಳೆಯ ಹಕ್ಕುಗಳು ಪಾಲನೆಗೆ ತರುವುದೇ ಮಹಿಳಾ ಸಬಲೀಕರಣದ ಬಸವಣ್ಣನ ತತ್ವದ ಆಚರಣೆಯಾಗಿದೆ. ☆

* 1319. 'ಶಿವಪ್ರಸಾದ', ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥನಗರ, ಬೆಳಗಾವಿ- 590 015.

> ದೇಹಭಾವವಳಿದಲ್ಲದೆ ಜೀವಭಾವವಳಿಯದು
> ಜೀವಭಾವವಳಿದಲ್ಲದೆ ಭಕ್ತಿ ಭಾವವಳವಡದು
> ಭಕ್ತಿ ಭಾವವಳವಟ್ಟಲ್ಲದೆ ಅರಿವು ತಲೆದೋರದು
> ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು
> ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು
> ಇದು ಕಾರಣ ಕಾಯದ ಜೀವದ ಹೊಲಿಗೆಯ ಅಳಿವ
> ಭೇದವ ತಿಳಿಯ ಬಲ್ಲಡೆ ಗುಹೇಶ್ವರ ಲಿಂಗದ ಅರಿವು
> ಸಾಧ್ಯವಪ್ಪುದು ಕಾಣಾ ಸಿದ್ಧರಾಮಯ್ಯ
>
> -ಅಲ್ಲಮಪ್ರಭು

> 'ಹಸಿದವರಿಗೆ ಮೊದಲು ಅನ್ನಹಾಕಿ ಊಟ ಹಾಕಬೇಕು, ಮಸೀದಿಯಲ್ಲಿ ಕುಳಿತು ಈ ಮಾತುಗಳನ್ನು ಹೇಳುತ್ತಿದ್ದೇನೆ. ಇದು ಸತ್ಯ' -ಶಿರಡಿ ಸಾಯಿಬಾಬ

> ಶ್ರುತಿ ಎಂದರೆ ಕೇಳಿದ್ದು, ಸ್ಮೃತಿ ಎಂದರೆ ಕೇಳಿದ್ದನ್ನು ತಲೆಯಲ್ಲಿ ತಾಳಿದ್ದು, ಆಗಮವೆಂದರೆ ಅನೂಚಾನವಾಗಿ, ಅವ್ಯಾಹತವಾಗಿ ಒಬ್ಬನಿಂದ ಪ್ರಾಪ್ತವಾದದ್ದು, ದರ್ಶನವೆಂದರೆ ಕೇಳಿದ್ದನ್ನು ಕೇಳಿ ತಾಳಿದ್ದನ್ನು ಪರಂಪರಾನುಗತವಾಗಿ ಪ್ರಾಪ್ತವಾದದ್ದನ್ನು ಸ್ವಬುದ್ಧಿ ಸ್ವವಿಮರ್ಶೆಗಳಿಂದ ನೋಡುವಿಕೆ. - ವೈ. ನಾಗೇಶ ಶಾಸ್ತ್ರಿ

# ರಾಷ್ಟ್ರಗಾನದ ಜನಕ ಬಂಕಿಮಚಂದ್ರ ಚಟರ್ಜಿ

-ಪ್ರೊ. ಟಿ.ಎನ್ ಪ್ರಭಾಕರ *

ವಂದೇಮಾತರಂ ಸುಜಲಾಂ ಸುಫಲಾಂ
ಮಲಯಜಶೀತಲಾಂ ಸಸ್ಯಶಾಮಲಾಂ ಮಾತರಂ ॥

ಶುಭ್ರಜ್ಯೋತ್ಸ್ನಾ ಪುಲಕಿತಯಾಮಿನೀಂ
ಪುಲ್ಲಕುಸುಮಿತ ದ್ರುಮದಲ ಶೋಭಿನೀಂ
ಸುಹಾಸಿನೀಂ ಸುಮಧುರ ಭಾಷಿಣೀಂ
ಸುಖದಾಂ ವರದಾಂ ಮಾತರಂ ॥

ಸಪ್ತಕೋಟಿಕಂಠ ಕಲಕಲನಿನಾದಕರಾಲೇ,
ದ್ವಿಸಪ್ತಕೋಟಿ ಭುಜೈರ್ಧೃತಖರಕರವಾಲೇ,
ಅಬಲಾ ಕೇನ ಮಾ ಏತ ಬಲೇ ॥

ಬಹುಬಲ ಧಾರಿಣೀಂ ನಮಾನಿ ತಾರಿಣೀಂ
ರಿಪುದಲವಾರಿಣೀಂ ಮಾತರಂ ॥

ತುಮಿ ವಿದ್ಯಾ ತುಮಿ ಧರ್ಮ
ತುಮಿ ಹೃದಿ ತುಮಿ ಧರ್ಮ
ತ್ವಂ ಹಿ ಪ್ರಾಣಾಃ ಶರೀರೇ ॥
ಬಾಹುತೇ ತುಮಿ ಮಾ ಶಕ್ತಿ
ಹೃದಯೇ ತುಮಿ ಮಾ ಭಕ್ತಿ
ತೋಮಾರಈ ಪ್ರತಿಮಾ ಗಡಿ ಮಂದಿರೇ ಮಂದಿರೇ॥

ತ್ವಂ ಹಿ ದುರ್ಗಾ ದಶಪ್ರಹರಣ ಧಾರಿಣೀ ।
ಕಮಲಾ ಕಮಲ-ದಲ ವಿಹಾರಿಣೀ
ವಾಣೀ ವಿದ್ಯಾದಾಯಿನೀ
ನಮಾಮಿ ಕಮಲಾಂ ಅಮಲಾಂ ಅತುಲಾಂ
ಸುಜಲಾಂ ಸುಫಲಾಂ ಮಾತರಂ ವಂದೇಮಾತರಂ
ಶ್ಯಾಮಲಾಂ ಸರಲಾಂ ಸುಸ್ಮಿತಾಂ ಭೂಷಿತಾಂ
ಧರಣೀಂ ಭರಣೀಂ ಮಾತರಂ ॥



ವಂದೇಮಾತರಂ ಸ್ವಾತಂತ್ರ್ಯದ ಬೀಜಮಂತ್ರ, ಸ್ವಾತಂತ್ರ್ಯದ ಸಂಗ್ರಾಮದ ರಣಘೋಷ. ಈ ಘೋಷಣೆ ಸಮಗ್ರ ಭಾರತವನ್ನು ಜಾತಿ, ಮತ, ಭಾಷೆ, ಸೀಮೆ ಇತ್ಯಾದಿಗಳನ್ನು ಮೀರಿ ಏಕಸೂತ್ರದಲ್ಲಿ ಬಂಧಿಸಿತ್ತು. ಈ ಹಾಡಿನ ದ್ರಷ್ಟಾರ ಬಂಕಿಮ ಚಂದ್ರ ಚಟರ್ಜಿ. ಜೂನ್ ೨೭ ಅವರ ಜನ್ಮದಿನ.

ವಂದೇ ಮಾತರಂ (ತಾಯೆ, ವಂದಿಸುವೆ)- ಈ ಎರಡು ಪದಗಳು ಅದೆಂತಹ ಗುಣಾತ್ಮಕ, ಸಂಘನಾತ್ಮಕ, ಭಾವನಾತ್ಮಕ ಕ್ರಾಂತಿಯನ್ನು ಭಾರತದಲ್ಲಿ ಮಾಡಿವೆ ಎಂಬುದು ಸರ್ವವೇದ್ಯ. ಇದೊಂದು ಸ್ವಾತಂತ್ರ್ಯದ ಬೀಜ ಮಂತ್ರ, ಸ್ವಾತಂತ್ರ್ಯ ಸಂಗ್ರಾಮದ ರಣಘೋಷ. ಈ ಘೋಷಣೆ ಸಮಗ್ರ ಭಾರತವನ್ನು ಜಾತಿ, ಮತ, ಭಾಷೆ, ಸೀಮೆ ಇತ್ಯಾದಿ ಗಳನ್ನು ಮೀರಿ ಏಕಸೂತ್ರದಲ್ಲಿ ಬಂಧಿಸಿತ್ತು. ವಂದೇ ಮಾತರಂ ಹಾಗೂ ಭಾರತ್ ಮಾತಾ ಕೀ ಜೈ ಘೋಷಣೆ ಗಳನ್ನು ಕೇಳಿದಾಕ್ಷಣ ಬ್ರಿಟಿಷ್ ಸರ್ಕಾರ ನಡುಗುತ್ತಿತ್ತು. ಇಂತಹ ವಂದೇ ಮಾತರಂ ಎಂಬ ಸಾಲಿನಿಂದ ಆರಂಭ ಗೊಳ್ಳುವ ಹಾಡನ್ನು ರಚಿಸಿದವರು ಬಂಕಿಮಚಂದ್ರ ಚಟರ್ಜಿ. ಅವರನ್ನು ಈ ಹಾಡಿನ ದ್ರಷ್ಟಾರ ಎಂದು ಹೇಳುವುದು ಔಚಿತ್ಯಪೂರ್ಣ. ದ್ರಷ್ಟಾರ ಅಂದರೆ,

* ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಮೈಸೂರು ವಲಯ, ಮೈಸೂರು.

ಯಾವುದೇ ವಸ್ತುವನ್ನು ನಾವು ಸುತ್ತಿ ಬರುವಾಗ ಮತ್ತೆ ಮತ್ತೆ ಬಲಗಡೆಯೇ ತಿರುಗುವುದಾದಲ್ಲಿ ಅದನ್ನು ಪ್ರದಕ್ಷಿಣೆ ಎನ್ನುತ್ತೇವೆ (ಪ್ರ+ದಕ್ಷಿಣಾ; ಪ್ರಕೃಷ್ಟಾ ದಕ್ಷಿಣತಃ ಇತಿ)- ಶತಾವಧಾನಿ ಆರ್. ಗಣೇಶ್





ಮನಸ್ಸಿನಲ್ಲಿ ಸ್ಫುರಿಸುದುದನ್ನು ಬುದ್ಧಿಯಲ್ಲಿ ಕಂಡುಕೊಂಡವನು ಎಂದರ್ಥ. ಈ ಹಾಡು ಸ್ಥೂಲವಾಗಿ ೨೧ ಸಾಲುಗಳನ್ನು ಹೊಂದಿದೆ. ದಾಸ್ಯ-ಸಂಘರ್ಷಗಳ ಸಮಯದಲ್ಲಿ ಮಾತ್ರವಲ್ಲದೆ ಶಾಂತಿ -ಸ್ವಾತಂತ್ರ್ಯದ ಸಮಯದಲ್ಲೂ ಅದರ ಪಾತ್ರವು ಮಹತ್ತರವೇ ಆಗಿತ್ತು. ಭಾರತಮಾತೆಯನ್ನು ಸಹಜ ಸುಂದರವಾಗಿ ವರ್ಣಿಸುವ ಈ ಹಾಡಿನ ಪ್ರತಿಯೊಂದು ಪದದಲ್ಲೂ ದೈವೀ ಛಾಯೆಯಿದೆ. ಭಾರತೀಯರೆಲ್ಲರ ನಾಲಿಗೆಗೆ ಇದೊಂದು ಧನ್ಯತೆಯ ಪ್ರತೀಕ. ಭಾರತದ ಎಲ್ಲ ಭಾಷೆಗಳ ಭಾಷಿಕರಿಗೂ ಈ ಹಾಡು ತಮ್ಮ ಭಾಷೆಯದೇ ಅನಿಸುತ್ತದೆ. ಕಾರಣ ವೆಂದರೆ ದೇಶೀಯ ಭಾಷೆಗಳಲ್ಲಿ ಚಿರಪರಿಚಿತವಾಗಿರುವ ಸರಳ ಸಂಸ್ಕೃತ ಪದಗಳೇ ಇದರಲ್ಲಿ ತುಂಬಿವೆ.

**ಕುಶಾಗ್ರಬುದ್ಧಿಯ ಬಾಲಕ :** ಬಂಕಿಮ ಚಂದ್ರ ಚಟರ್ಜಿ ೧೭೫ ವರ್ಷಗಳ ಹಿಂದೆ ಅಂದರೆ ೨೭-೦೬-೧೮೩೮ ರಂದು ಬಂಗಾಲದ ಪರಗಣ ಜಿಲ್ಲೆಯ ಕಾಂಚಲಪಾಡಾ ಎಂಬ ಹಳ್ಳಿಯಲ್ಲಿ ಜನಿಸಿದರು. ತಂದೆ ಯಾದವಚಂದ್ರ ಚಟ್ಟೋಪಾಧ್ಯಾಯ. ತಾಯಿ ದುರ್ಗಾದೇವಿ. ಆರ್ಷ ಪರಂಪರೆಯ ಅವರ ಮನೆತರ ಬಹುಜನಪ್ರಿಯವಾಗಿತ್ತು. ತಂದೆ ಮಿಡ್ನಾಪುರ ಜಿಲ್ಲಾಧಿಕಾರಿಗಳಾಗಿದ್ದರು. ಬಂಕಿಮ ಚಂದ್ರ ಅಂದರೆ ಬಿದಿಗೆಯ ಚಂದ್ರ ಎಂದರ್ಥ. ಶುಕ್ಲಪಕ್ಷದ ಚಂದ್ರನು ಮೊದಲು ದೋಣಿಯ ಆಕಾರದಲ್ಲಿದ್ದು, ಕ್ರಮೇಣ ತುಂಬಿಕೊಂಡು, ಹುಣ್ಣಿಮೆಗೆ ಪೂರ್ಣನಾಗುತ್ತಾನೆ. ಇದೇ ರೀತಿ ಈ ಬಾಲಕ ವರ್ಧಿಸಲಿ ಎಂಬ ಹಾರೈಕೆ ಅದಾಗಿತ್ತು. ಈತನ ಬುದ್ಧಿಶಕ್ತಿ ಏಕಸಂಧಿಗ್ರಾಹವಾಗಿದ್ದು, ಕುಶಾಗ್ರವೆನಿಸಿತ್ತು. ಒಂದೇ ದಿನದಲ್ಲಿ ವರ್ಣಮಾಲೆಯನ್ನೆಲ್ಲ ಕಲಿತ ವಿಶೇಷತೆ ಅವನದು. ಶಾಲಾ ಶಿಕ್ಷಣ ಮುಗಿದ ಬಳಿಕ ಹೂಗ್ಲಿಯ ಮೊಹಸಿನ್ ಕಾಲೇಜು ಹಾಗೂ ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಉನ್ನತ ಶಿಕ್ಷಣವನ್ನು ಹತ್ತು ವರ್ಷಗಳ ಕಾಲ ಬಂಕಿಮಚಂದ್ರ ಪಡೆದರು. ಎಲ್ಲ ಕ್ಷೇತ್ರಗಳಲ್ಲೂ ವಿಶೇಷ ಯೋಗ್ಯತೆಯ ಪಾರಿತೋಷಕಗಳನ್ನು ತಮ್ಮ ಬಗಲಿಗೆ ಹಾಕಿಕೊಳ್ಳುವುದು ಇವರಿಗೆ ಗಂಗಾಪಾನ ಮಾಡಿದಷ್ಟೇ ಸುಲಭವೆನಿಸಿತು. ಬಂಗಾಳಿ, ಸಂಸ್ಕೃತ, ಇಂಗ್ಲಿಷ್ ಈ ಮೂರೂ ಭಾಷೆಗಳಲ್ಲಿ ಅವರಿಗೆ ಪ್ರಭುತ್ವವಿದ್ದಿತು. ಕಲ್ಕತ್ತೆಯ ಆ ಕಾಲೇಜಿನಲ್ಲಿ ಆ ವರ್ಷದ ಅಭ್ಯರ್ಥಿಗಳಲ್ಲಿ ಇಬ್ಬರು ಮಾತ್ರ ಬಿ.ಎ. ನಲ್ಲಿ ಉತ್ತೀರ್ಣರಾದರು. ಅವರ ಪೈಕಿ ಬಂಕಿಮಚಂದ್ರ ಪ್ರಥಮರೆನ್ನುವುದು ಒಂದು ಹೆಗ್ಗಳಿಕೆ. ಬಿ.ಎ. ವ್ಯಾಸಂಗದ ಬಳಿಕ ಅವರಿಗೆ ಡೆಪ್ಯುಟಿ ಕಲೆಕ್ಟರ್ ಹುದ್ದೆ ಲಭಿಸಿತು. ಮುಂದೆ ಅವರು ಬಿ.ಎಲ್. ಪದವಿಗೂ ಭಾಜನರಾದರು.

**ಆತ್ಮಾಭಿಮಾನದ ನ್ಯಾಯಾಧೀಶ :** ಕ್ರಮೇಣ ಇವರಿಗೆ ಉಪ ನ್ಯಾಯಾಧೀಶ ಅಥವಾ ಡೆಪ್ಯೂಟಿ ಮ್ಯಾಜಿಸ್ಟ್ರೇಟ್ ಎಂಬ ನೌಕರಿ ದೊರೆಯಿತು. ಆಗ ಸಹಜವಾಗಿ ಹಿರಿಯ ಅಧಿಕಾರಿಗಳು ದರ್ಪಿಷ್ಟ ಬ್ರಿಟಿಷರಾಗಿರುತ್ತಿದ್ದರು. ಬಂಕಿಮರಲ್ಲಿ ವಿನಯುವು ಚೆನ್ನಾಗಿ ಮನೆ ಮಾಡಿತ್ತು. ಆದರೆ ಅದು ಅತಿ ವಿನಯವಾಗಿರಲಿಲ್ಲ. ಯಾರೇ ಅನ್ಯಾಯ ಮಾಡಿದರೂ, ಅದನ್ನವರು ಸಹಿಸುತ್ತಿರಲಿಲ್ಲ. ಇದರಿಂದಾಗಿ ಹಲವು ಆಂಗ್ಲ ಅಧಿಕಾರಿಗಳಿಗೆ ಬಂಕಿಮಚಂದ್ರರೆಂದರೆ ಕೋಪ, ವಿರಸ. ಇದರ ಪರಿಣಾಮ ಅವರು ವಿಭಿನ್ನ ಊರುಗಳಿಗೆ ವರ್ಗ ಗೊಳ್ಳುತ್ತಿದ್ದರು; ಹಾಗೂ ಅವರಿಗೆ ಅರ್ಹತೆಯಿದ್ದರೂ ಹಿರಿಯ ಸ್ಥಾನಕ್ಕೆ ಬಡ್ತಿ ದೊರೆಯಲೇ ಇಲ್ಲ!

**ಭಕ್ತಿ-ಪ್ರೀತಿ-ಶಾಂತಿ :** ಮುಂದೆ ಬಂಕಿಮರಿಗೆ ದೀನಬಂಧು ಮಿತ್ರ ಎಂಬ ಬಂಗಾಲಿ ಶ್ರೇಷ್ಠ ನಾಟಕಕಾರರ ಪರಿಚಯ ಲಭಿಸಿತು, ಅವರ ಪ್ರಭಾವದಿಂದ ಸಾಹಿತ್ಯ ಕೃಷಿ ನಡೆಯಿತು; ಒಟ್ಟು ೧೪ ಕಾದಂಬರಿಗಳನ್ನು ಬರೆದರು. ಇವು ಭಾರತದ ಇನ್ನಿತರ ಭಾಷೆಗಳಲ್ಲಿ ಅನುವಾದಗೊಂಡವು. ಸಾಹಿತ್ಯ ಕೃಷಿಯನ್ನು ಸಮರ್ಥವಾಗಿ ಮುಂದುವರಿಸಬೇಕೆಂಬ ಹಿನ್ನಲೆಯಲ್ಲಿ ಅವರು ನೌಕರಿಯಿಂದ ಸ್ವಯಂನಿವೃತ್ತಿಗಾಗಿ ಮನವಿ ಸಲ್ಲಿಸಿದರು. ಆದರೆ ಅಧಿಕಾರಿಗಳು ಅನುಮತಿಸಲಿಲ್ಲ. ಆನಂತರ ೫೩ನೇ ವಯಸ್ಸಿನಲ್ಲಿ ಚಾರ್ಲ್ಸ್ ಇಲಿಯನ್ ಎಂಬ ಅಧಿಕಾರಿ ಇದಕ್ಕೆ ಒಪ್ಪಿಗೆ ನೀಡಿದರು. ಮಾಸಿಕ ೪೦೦ ರೂಗಳ ವಿಶ್ರಾಂತಿ ವೇತನ ಲಭಿಸಿತು. ಅದಾಗಿ ಮೂರೇ ವರ್ಷಗಳ ಬಳಿಕ (೧೮೯೪)ಬಂಕಿಮರು ಮರಣ ಹೊಂದಿದರು. ಕೊನೆಗಾಲದಲ್ಲಿ ಉಪನಿಷತ್ತು, ವೇದಾಂತದ ಬಗ್ಗೆ ಹೆಚ್ಚು ಆಸಕ್ತಿಯುಂಟಾಯಿತು. ವೇದಮಂತ್ರಗಳಿಗೆ ವ್ಯಾಖ್ಯಾನ ಮತ್ತು ಕೃಷ್ಣಚರಿತೆಯನ್ನು ಬರೆದರು. ಇವರ

'ವಿನಯ'ವಿದ್ದರೆ ಅದುವೇ ಜೀವನ' -ನವಕಲ್ಯಾಣಮಠದ ಪೂಜ್ಯ ಶ್ರೀ ಕುಮಾರಸ್ವಾಮಿಗಳು

ಇನ್ನಿತರ ಕೃತಿಗಳೆಂದರೆ 'ದುರ್ಗೇಶ ನಂದಿನಿ', 'ವಿಷವೃಕ್ಷ', 'ದೇವೀ ಚೌಧುರಾಣೀ', 'ಕೃಷ್ಣಕಾಂತನ ಉಯಿಲು' ಇತ್ಯಾದಿ.

ಆ ಕಾಲದಲ್ಲಿ ಪತ್ರಿಕೆಗಳ ಪ್ರಕಾಶನ ಅಷ್ಟೊಂದು ವ್ಯಾಪಕವಾಗಿರಲಿಲ್ಲ. ಇದನ್ನರಿತ ಬಂಕಿಮಚಂದ್ರರು ೧೮೭೨ರಲ್ಲಿ 'ವಂಗದರ್ಶನ' ಎಂಬ ಮಾಸಪತ್ರಿಕೆ ಆರಂಭಿಸಿದರು. ಕಥೆ, ಕಾದಂಬರಿಗಳ ಜೊತೆಯಲ್ಲೇ ಆಧುನಿಕ ವಿಜ್ಞಾನ, ಜನರ ಚಿಂತನೆಗಳನ್ನು ಒರೆಗೆ ಹಚ್ಚುವಂತಹ ವಿಮರ್ಶಾತ್ಮಕ ಲೇಖನಗಳನ್ನು ಒಳಗೊಂಡ ಪತ್ರಿಕೆಯನ್ನಾಗಿ ಅದನ್ನು ಬೆಳೆಸಿದರು. ಅದರ ಮೊದಲ ಸಂಚಿಕೆಯಲ್ಲೇ ಅವರು ಹೀಗೆ ಬರೆದರು; 'ಗಿಲೀಟನ ಹಿತ್ತಾಳೆಗಿಂತ, ಶುದ್ಧ ಬೆಳ್ಳಿಯೇ ಒಳ್ಳೆಯದು. ನಕಲು ಇಂಗ್ಲೀಷಿನವನಿಗಿಂತ ಶುದ್ಧ ಬಂಗಾಳಿಯೇ ವಾಸಿ.. ವಿದ್ಯಾವಂತರೂ ಜ್ಞಾನವಂತರೂ ಆದ ಬಂಗಾಳಿಗಳು ಎಲ್ಲಿಯವರೆಗೆ ತಾವು ಹೇಳಬೇಕಾದದ್ದನ್ನು ಬಂಗಾಳಿಯಲ್ಲಿ ಹೇಳುವುದಿಲ್ಲವೋ, ಅಲ್ಲಿಯವರೆಗೆ ಬಂಗಾಳಿಗಳು ಮುಂದಕ್ಕೆ ಬರಲಾರರು' (ಈ ಮಾತನ್ನು ಈಗ ನಾವು ಕನ್ನಡಕ್ಕೂ ಅನ್ವಯಿಸಿಕೊಳ್ಳಬೇಕು)

ಹೀಗೆ ಬಂಕಿಮರ ಮಾತೃಭಾಷಾ ಪ್ರೀತಿ ನಿಚ್ಚಳವಾಗಿತ್ತು. ರಾಮಕೃಷ್ಣ ಪರಮಹಂಸರು ನರೇಂದ್ರನನ್ನು ಬಂಕಿಮ ಚಂದ್ರರ ಬಳಿಗೆ ಒಮ್ಮೆ ಕಳುಹಿಸಿ, ಅವರೊಂದಿಗೆ ವಿಚಾರ ವಿನಿಮಯ ಮಾಡಲು ತಿಳಿಸಿದ್ದರು ಎಂಬುದನ್ನು ನೆನಪಿಸಿ ಕೊಂಡರೆ ಬಂಕಿಮರ ಮೇರು ವ್ಯಕ್ತಿತ್ವದ ಅರಿವಾಗುತ್ತದೆ.

**ರಾಷ್ಟ್ರಗಾನದ ಗಂಗೋತ್ರಿ :**

೧೮೭೫ರಲ್ಲಿ ಅವರು ಕಲ್ಕತ್ತೆ ಯಿಂದ ತಮ್ಮ ಊರಾದ ಕಾಂತಾಲಪಾಡಕ್ಕೆ ರೈಲಿನಲ್ಲಿ ಪಯಣಿಸುತ್ತಿದ್ದರು. ಕಿಟಕಿಯಿಂದ ನೋಡಿದಾಗ ಹಸಿರಿನ ಸೆರಗು ಹೊದ್ದ ಪ್ರಕೃತಿ ಮಾತೆ! ನದಿ, ಹಳ್ಳಕೊಳ್ಳಗಳಲ್ಲಿ ತುಂಬಿದ ನೀರು; ಭೂಮಿತಾಯಿ ಪ್ರಸನ್ನಳಾಗಿದ್ದಳು, ಕವಿ ಕಣ್ಣುಮುಚ್ಚಿ ಧ್ಯಾನಮಗ್ನರಾದರು. ಆಗ ಅವರ ಒಳಗಣ್ಣು ತೆರೆಯಿತು; ಭಾರತಮಾತೆಯ ಪರಿಪೂರ್ಣ ದರ್ಶನವಾಯಿತು.

ಅವರ ಮನಸ್ಸಿನಲ್ಲೇ ಕವಿತೆಯು ಸೃಷ್ಟಿಗೊಂಡಿತು. ಅವರು ಯಾರೊಂದಿಗೂ ಮಾತನಾಡಲಿಲ್ಲ. ರೈಲಿನಿಂದ ಇಳಿದು, ನೇರವಾಗಿ ಮನೆಗೆ ಬಂದು ತಮ್ಮ ಮಗಳಿಗೆ ಈ ಮಾನಸೀಸೃಷ್ಟಿಯನ್ನು ಲಿಪಿಬದ್ಧಗೊಳಿಸಲು ಸೂಚಿಸಿದರು. ಹೀಗೆ ಆವಿಷ್ಕಾರಗೊಂಡದ್ದೇ 'ವಂದೇ ಮಾತರಂ'ಗೀತೆ. ಸಂತಾನರು ಎಂಬ ಗುಡ್ಡಗಾಡಿನ ಜನರು ಮುಸಲ್ಮಾನರ ಆಕ್ರಮಣದ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದರು. ಇದರ ಹಿನ್ನಲೆಯಲ್ಲೇ ಬಂಕಿಮರು 'ಆನಂದಮಠ' ಕಾದಂಬರಿ ಬರೆದರು. ಇದರಲ್ಲಿ ವಂದೇ ಮಾತರಂ ಹಾಡನ್ನು ಅವರು ಸಮರ್ಥವಾಗಿ ಬಳಸಿಕೊಂಡರು. ಈ ಕಾದಂಬರಿಯು ೧೮೮೦ರಿಂದ ೧೮೮೨ರವರೆಗೆ 'ವಂಗದರ್ಶನ' ಮಾಸಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟಗೊಂಡಿತು. ಅದು ಪುಸ್ತಕರೂಪದಲ್ಲಿ ಪ್ರಕಟಗೊಂಡಿತಲ್ಲದೆ, ದೇಶದ ಬಹುತೇಕ ಭಾಷೆಗಳಿಗೆ ಅನುವಾದಗೊಂಡಿತು.(ಕನ್ನಡದಲ್ಲಿ ಬಿ. ವೆಂಕಟಾಚಾರ್ಯರ ಅನುವಾದವು ಈಗ ಲಭ್ಯವಿದೆ).

ರಾಷ್ಟ್ರ ಗೌರವ ಸಂರಕ್ಷಣಾ ಪರಿಷತ್ ಸಂಸ್ಥೆಯು ಇಂತಹ ವಿಶಿಷ್ಟ ವ್ಯಕ್ತಿಗಳ ಕೊಡುಗೆಯನ್ನು ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೆ ಪರಿಚಯಿಸಲೆಂದು ಕಾರ್ಯಪ್ರವೃತ್ತವಾಗಿದೆ. ಇಂತಹ ರಾಷ್ಟ್ರೀಯ ಮಹನೀಯರ ಕೊಡುಗೆಯನ್ನು ಬಿಂಬಿಸುವ ಕ್ಯಾಲೆಂಡರ್‌ಗಳ ಪ್ರಕಟಣೆ, 'ವಂದೇ ಮಾತರಂ' ಗಾನವನ್ನು ಸಂಚಾರಿ ದೂರವಾಣಿಗಳ ರಿಂಗಣದಲ್ಲಿ ಸೇರಿಸುವುದು, ವಂದೆ ಮಾತರಂ ಗೀತೆಯೊಂದಿಗೆ ಕ್ರಾಂತಿಕಾರಿ ಸ್ವಾತಂತ್ರ್ಯ ಹೋರಾಟಗಾರರ ಭಾವಚಿತ್ರಗಳ ಕಾರ್ಡ್‌ಗಳ ಪ್ರಕಾಶನ, ಇಂತಹ ಮಹನೀಯರ ಹೆಸರಿನಲ್ಲಿ ಚಿಂತನಕೂಟ, ಪ್ರಶಸ್ತಿ ಸ್ಥಾಪನೆ ಇತ್ಯಾದಿಗಳನ್ನು ಕೈಗೊಂಡಿರುವುದು ಔಚಿತ್ಯಪೂರ್ಣವಾಗಿದೆ. ಜನರು ಈ ರಾಷ್ಟ್ರೀಯ ಕಾಯಕದಲ್ಲಿ ಕೈಜೋಡಿಸಬೇಕು.

☆

ಶಿವೋಪದೇಶವಿಲ್ಲದ್ದು ಶೂದ್ರಾನ್ನ, ಹೊಲೆಗಳೆವುದಕ್ಕೆ ಮಾಡಿದ್ದು ಸೂತಕಾನ್ನ, ಸ್ಥಾವರಕ್ಕೆ ಮಾಡಿದ್ದು ನೈವೇದ್ಯಾನ್ನ, ಪಿತೃ ಕಾರ್ಯಾರ್ಥ ಮಾಡಿದ್ದು ಶ್ರಾದ್ಧಾನ್ನ, ಪರ್ವ (ಹಬ್ಬ)ಕ್ಕೆ ಮಾಡಿದ್ದು ಸಮೂಹಾನ್ನ, ಶ್ರೀಮಂತಿಕೆಗಾಗಿ ಮಾಡಿದ್ದು ರಾಜಾನ್ನ, ಲಿಂಗ ಜಂಗಮಕ್ಕೆ ಮಾಡಿದ್ದು ಪ್ರಸಾದಾನ್ನ.





# ಸ್ವಾತಂತ್ರ್ಯೋತ್ಸವ ರಾಷ್ಟ್ರೀಯ ಪ್ರಜ್ಞೆಯ ಜಾಗೃತಿಗೆ ಸಕಾರಣವಾಗಲಿ!

-ಯೋಗೀಶ್ ನಿರ್ವಿಕಲ್ಪ *

ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ನಾವೊಂದು ಕ್ಷಣ ಅವಲೋಕಿಸಿದಾಗ ಸಾವಿರಾರು ಸ್ವಾತಂತ್ರ್ಯ ಹೋರಾಟದ ಚಳುವಳಿಗಳು ನಮ್ಮ ಕಣ್ಮುಂದೆ ಸಾಗಿ ಹೋಗುತ್ತವೆ. ನಾವಿಂದು ಪಡೆದಿರುವ ಸ್ವಾತಂತ್ರ್ಯದಲ್ಲಿ ಸಾವಿರಾರು ದೇಶಪ್ರೇಮಿಗಳ ತ್ಯಾಗಬಲಿದಾನಗಳಿವೆ. ಸಾವಿರಾರು ವೀರ ಮಾತೆಯರ ಸ್ವಾತಂತ್ರ್ಯಾಭಿಮಾನದ ನೋವಿನ ಕಣ್ಣೀರ ಕಥೆ ಇದೆ. ನಾವು ಪಡೆದ ಸ್ವಾತಂತ್ರ್ಯದಲ್ಲಿ ಸಾವಿರಾರು ದೇಶಭಕ್ತರ ಆಶೋತ್ತರಗಳು ಸಹ ಅಡಗಿವೆ. ಈ ಪರಮಸತ್ಯವನ್ನು 'ಜಲಿಯನ್‌ವಾಲಾ ಬಾಗ್'ನಂತಹ ದುರಂತ ಸಂಗತಿಗಳು ನಮಗೆ ಸದಾ ನೆನಪು ಮಾಡಿಕೊಡುತ್ತವೆ. ಸ್ವಾತಂತ್ರ್ಯಾಭಿಮಾನದ ಇಂತಹ ನೂರಾರು ಸಂಗತಿಗಳನ್ನು ನಾವು ನೆನಪು ಮಾಡಿಕೊಳ್ಳುವುದರ ಮೂಲಕ ಸ್ವಾತಂತ್ರ್ಯದ ಅರ್ಥವನ್ನು ಗ್ರಹಿಸುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಸ್ವಾತಂತ್ರ್ಯ ದಿನಾಚರಣೆ ಕೇವಲ ಔಪಚಾರಿಕವಾಗಿರದೇ ಅದರ ದಿವ್ಯ ಉದ್ದೇಶದತ್ತ ನಮ್ಮ ಚಿತ್ತಸಾಗಬೇಕು. ಸ್ವಾತಂತ್ರ್ಯದ ಸಾರ್ಥಕತೆಯ ದಿಕ್ಕಿನಲ್ಲಿ ಬೆಳಕು ಹರಿಸುವ ಕಾರ್ಯ ನಡೆಯಬೇಕು. ನಾವು ಪಡೆದಿರುವ ಸ್ವಾತಂತ್ರ್ಯ ಸಾರ್ಥಕತೆಯ ಸತ್ಪಥದಲ್ಲಿ ಸಾಗಿದಾಗ ಮಾತ್ರ ನಾವು ಪಡೆದಿರುವ ಸ್ವಾತಂತ್ರ್ಯಕ್ಕೊಂದು ಅರ್ಥ ಮೂಡಲು ಸಾಧ್ಯ

ಒಂದು ಕುಟುಂಬ ಅಥವಾ ರಾಷ್ಟ್ರದಲ್ಲಿ ಪರಸ್ಪರ ನಂಬಿಕೆ-ವಿಶ್ವಾಸ ಇಲ್ಲವಾದರೆ ಅದು ಯಾವ ರೀತಿ ಅನ್ಯರ ಪ್ರವೇಶಕ್ಕೆ ನಾಂದಿಯಾಗುತ್ತದೆಯೋ ಹಾಗೆಯೇ ೧೮ನೇ ಶತಮಾನದಲ್ಲಿ ಭಾರತೀಯರಲ್ಲಿದ್ದ ರಾಜಕೀಯದ ಅಸ್ಥಿರತೆ-ಅನೈಕ್ಯತೆ ಮತ್ತು ಮಾನವೀಯ ಪ್ರೇಮ ಸಂಬಂಧದ ಭ್ರಾತೃತ್ವದ ಕೊರತೆ ಆಂಗ್ಲರ ಚಕ್ರಾಧಿಪತ್ಯದ ಸ್ಥಾಪನೆಗೆ ಅವಕಾಶ ನೀಡಿತು. ಭಾರತ ಅನುಭವಿಸಿದ ಸ್ವಾತಂತ್ರ್ಯ ರಹಿತ ಕರಾಳ ದಿನಗಳ ನೆನಪು ನಮ್ಮೆಲ್ಲರಿಗೂ ಮರೆಯಲಾಗದಂತಹ ಜೀವನಾನುಭವದ ಪಾಠ ಎನ್ನಬಹುದು. ಭಾರತದಲ್ಲಿ ಆಂಗ್ಲರ ಚಕ್ರಾಧಿಪತ್ಯದ ಸ್ಥಾಪನೆಯ ಪರಿಣಾಮ ನಮ್ಮ ಸನಾತನ ಸಂಸ್ಕೃತಿಯ ಮೇಲೆ ಪಾಶ್ಚಾತ್ಯ ನಾಗರೀಕತೆಯ ಪರಿಣಾಮ ಬೀರಿತು. ಸಾಮಾಜಿಕ-ಆರ್ಥಿಕ-ಧಾರ್ಮಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳ ಮೇಲೆ ಅಗಾಧವಾದ ಬದಲಾವಣೆಯ ಗಾಳಿ ಬೀಸಿತು. ಆಂಗ್ಲರ ಆಳ್ವಿಕೆಗೆ ಒಳಪಟ್ಟ ಭಾರತ ದೇಶವನ್ನು ತಮ್ಮ ಆಸ್ತಿಯೆಂದು ಭಾವಿಸಿದ ಆಂಗ್ಲರು ಆರ್ಥಿಕ ಶೋಷಣೆಯ ಜೊತೆ ದೇಶದ ಅಮೂಲ್ಯ ಸಂಪತ್ತನ್ನು ಸಹ ತಮ್ಮ ದೇಶಕ್ಕೆ ಕೊಂಡೊಯ್ದರು. ಭಾರತದ ಸಣ್ಣ ಕೈಗಾರಿಕೆಗಳು ಸಂಪೂರ್ಣವಾಗಿ ಅವನತಿ ಕಂಡವು. ಭಾರತೀಯರ ಸ್ವಾತಂತ್ರ್ಯದ ಚಳುವಳಿಯನ್ನು ಪ್ರತಿಬಂಧಿಸಲು ಆಂಗ್ಲರು ಅನುಸರಿಸಿದ ದಬ್ಬಾಳಿಕೆ ಮತ್ತು ದಮನಕಾರಿ ನೀತಿ ಮಾನವೀಯ ಸಮಾಜವೆಂದೂ ಕ್ಷಮಿಸಲಾರದಷ್ಟು ಅಮಾನವೀಯ ಎನ್ನಬಹುದು.

ಮಹಾತ್ಮಗಾಂಧಿಜಿಯವರ ಸಮರ್ಥ ನಾಯಕತ್ವದಲ್ಲಿ ಆಂಗ್ಲರ ಸರ್ವ ರೀತಿಯ ಆಕ್ರಮಣಗಳನ್ನು ಸಮರ್ಥವಾಗಿ ದೇಶ ಎದುರಿಸಿತು. ಸತ್ಯ-ಅಹಿಂಸೆಯ ತತ್ವಾದರ್ಶದ ಮೂಲಕ ದೇಶ ಸ್ವಾತಂತ್ರ್ಯ ಸಾಧಿಸಿದ್ದು ಇಂದಿಗೂ ಅದೊಂದು ವಿಸ್ಮಯ ಸಂಗತಿ ಎಂದೇ ಜಗತ್ತು ತಿಳಿದಿದೆ. ಸತ್ಯ ಮತ್ತು ಅಹಿಂಸೆಯ ತತ್ವಗಳ ಮಹತ್ವವನ್ನು ಇಡೀ ಜಗತ್ತಿಗೇ ಸಾಕ್ಷಿ ಪ್ರಜ್ಞೆಯಾಗಿ ಸಾಕ್ಷೀಕರಿಸಿದ ಕೀರ್ತಿ ಮಹಾತ್ಮ ಗಾಂಧೀಜಿಯವರಿಗೆ ಸಲ್ಲುತ್ತದೆ. ಸಾವಿರಾರು ದೇಶ ಪ್ರೇಮಿಗಳ ಅವಿರತ ಶ್ರಮದ ಫಲವಾಗಿ ಭಾರತ ಸ್ವಾತಂತ್ರ್ಯಗೊಂಡಿತು. ಭಾರತದಲ್ಲಿನ ಹಿಂದೂ-ಮುಸ್ಲಿಂರ ನಡುವಿನ ಮಧುರ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭ ೨೦೨.

'ಭಕ್ತಿ ಎಂದರೆ ಭಗವಂತನನ್ನು ಬೇಡುವುದಲ್ಲ, ಭಗವಂತನಲ್ಲಿ ಕೂಡುವುದು'
-ಸಿ.ವಿ. ಚನ್ನಬಸವೇಶ್ವರ

ಬಾಂಧವ್ಯಕ್ಕೆ ಧಕ್ಕೆ ಉಂಟು ಮಾಡಿದ ಆಂಗ್ಲರು ಅಂತ್ಯದಲ್ಲಿ ದೇಶವನ್ನು ವಿಭಜಿಸಿ ಹೋದದ್ದು ಅವರ ವಿಕ್ಷಿಪ್ತ ಮನಸ್ಸಿಗೊಂದು ಸಾಕ್ಷಿ ಎನ್ನಬಹುದು.

೧೯೪೭ರ ಆಗಸ್ಟ್ ೧೫ರಲ್ಲಿ ಭಾರತ ಸ್ವಾತಂತ್ರ್ಯ ರಾಷ್ಟ್ರವಾಗಿ ಉದಯಿಸಿತು. ಮೊಟ್ಟಮೊದಲ ಪ್ರಧಾನಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ ಪಂಡಿತ್ ಜವಾಹರ್‌ಲಾಲ್ ನೆಹರೂ ದೇಶವನ್ನು ಪ್ರಗತಿ ಪಥದಲ್ಲಿ ಕೊಂಡೊಯ್ಯುವ ಪ್ರಯತ್ನ ಮಾಡಿದರು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ದೇಶದ ಆರ್ಥಿಕ ನೀತಿ ಸಾಗಿದರೆ ಶ್ರೀಮಂತರು ಹಾಗೂ ಬಡವರ ನಡುವಿನ ಅಂತರ ಹೆಚ್ಚಾಗುತ್ತದೆ ಎಂದು ಭಾವಿಸಿದ ಅವರು ೧೯೫೦ರ ಮಾರ್ಚ್‌ನಲ್ಲಿ ಯೋಜನಾ ಆಯೋಗ (Planning Commission) ವನ್ನು ರಚಿಸಿದರು. ನಂತರ ೧೯೫೧ರಿಂದ ಮೂರು ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೊಳಿಸಿದರು. ೧೯೫೧-೫೬ರ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ, ೧೯೫೬-೬೧ರ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕೆ ಹಾಗೂ ೧೯೬೧-೬೬ರ ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ಮತ್ತು ಕೈಗಾರಿಕೆಗಳಿಗೆ ಆದ್ಯತೆ ನೀಡಲಾಯಿತು. ಈ ಎಲ್ಲಾ ಪಂಚವಾರ್ಷಿಕ ಯೋಜನೆ ಗಳ ಮುಖ್ಯ ಉದ್ದೇಶ ಆರ್ಥಿಕ ಪ್ರಗತಿ- ಸ್ವಾವಲಂಬನೆ-ನಿರುದ್ಯೋಗ ನಿವಾರಣೆ ಆದಾಯದ ಸಮಾನ ಹಂಚಿಕೆ-ಬಡತನ ನಿರ್ಮೂಲನೆ-ಸಾಮಾಜಿಕ ನ್ಯಾಯ-ಸಮಾಜ ವಾದಿ ಆರ್ಥಿಕ ನೀತಿ ..... ಮುಂತಾದವುಗಳಾಗಿದ್ದವು. ನಂತರ ದೇಶ ನೂರಾರು ರಚನಾತ್ಮಕ ಕಾರ್ಯಕ್ರಮಗಳ ಮೂಲಕ ಸಾಧಿಸಿದ ಸಾಧನೆ ಜಾಗತಿಕ ಮಟ್ಟದಲ್ಲಿಯೂ ಪ್ರಶಂಸೆಗೆ ಪಾತ್ರವಾಯಿತು. ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರದಲ್ಲಿ ಸಾಧಿಸುತ್ತಿರುವ ಸಾಧನೆಗೆ, ೨೦೧೩ ಜುಲೈನಲ್ಲಿ ಉಡಾವಣೆಗೊಂಡ ದಿಶಾದರ್ಶನ (Navigation Satellite) ಸಹ ಒಂದು ಉತ್ತಮ ಉದಾಹರಣೆ ಎನ್ನಬಹುದು. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಂಬಂಧದ ವಿಷಯದಲ್ಲಿ ರೂಪಿಸಿದ ಯೋಜನೆಗಳು ಸಹ ಅತ್ಯಂತ ಮಹತ್ವಪೂರ್ಣ ಎನ್ನಬಹುದು. ರಕ್ಷಣಾ-ಸಂಶೋಧನೆ-ಪರಮಾಣು ಶಕ್ತಿ-ಪರಿಸರ ಮತ್ತು ಅರಣ್ಯ ಸಂರಕ್ಷಣೆ-ವೈದ್ಯಕೀಯ ವಿಜ್ಞಾನ .... ಮುಂತಾದ ಕ್ಷೇತ್ರಗಳಲ್ಲಿ ನಿರೀಕ್ಷೆಗೂ ಮೀರಿದ ಸಾಧನೆ ದೇಶ ಸಾಧಿಸಿತು. ದೇಶದ ವಿದೇಶಾಂಗ ನೀತಿ ಜಗತ್ತಿಗೊಂದು ಆದರ್ಶ ಎಂದರೆ ತಪ್ಪಾಗಲಾರದು. ದೇಶದ ಸನಾತನ ತತ್ವ ಮೌಲ್ಯಗಳು ಮತ್ತು ಸಾರ್ವಕಾಲಿಕ ಸತ್ಯ ತತ್ತ್ವಗಳ ಆಧಾರದ ಮೇಲೆ ದೇಶ ಪ್ರಗತಿಗೊಳ್ಳಬೇಕೆಂಬ ಅದಮ್ಯವಾದ ಆಶಯ ಅಂದಿನ ಎಲ್ಲಾ ರಾಜಕೀಯ ನಾಯಕರ ಸುಪ್ತ ಮನಸ್ಸಿನಲ್ಲಿ ಅಡಗಿತ್ತು. ಆ ದಿಕ್ಕಿನಲ್ಲಿ ಅವರೆಲ್ಲರ ಪ್ರಯತ್ನ ಸಾಗಿದ್ದನ್ನು ನಾವು ಇತಿಹಾಸದ ಪುಟಗಳಿಂದ ತಿಳಿಯಬಹುದು.

ದೇಶ ಸ್ವಾತಂತ್ರ್ಯಗೊಂಡು ಸಾಧಿಸಿದ ಸಾಧನೆ ಪ್ರಶಂಸನೀಯ ಎನಿಸಿದರೂ ತದನಂತರದ ದಿನಗಳಲ್ಲಿ ಅದು ಸಾಗಿದ ಹಾದಿ ಕಂಡಾಗ ಮನದಲ್ಲಿ ನೋವಿನ ಕಾರ್ಮೋಡ ಆವರಿಸುತ್ತದೆ. ನಾವಿಂದು ಸ್ವಾತಂತ್ರ್ಯಗೊಂಡು ೬೬ ವಸಂತಗಳನ್ನು ಕಳೆದರೂ ನಾವಿಂದು ಸಾಧಿಸಬೇಕಾದ ನಿರ್ದಿಷ್ಟ ಗುರಿ ಸಾಧನೆಗಳಿಂದ ಬಹುದೂರ ಸಾಗಿದ್ದೇವೆನೋ ಎಂದೆನಿಸುತ್ತದೆ. ಯಾವ ಮುಖ್ಯ ಆಶಯಗಳನ್ನಿಟ್ಟು ಕೊಂಡು ದೇಶದ ಸಾರ್ವಭೌಮತೆಗಾಗಿ ಹೋರಾಡಿದ ದೇಶಭಕ್ತರ ಆಶೋತ್ತರ ಮತ್ತು ಅವರ ಪವಿತ್ರವಾದ ದೇಶಭಕ್ತಿಯ ಭಾವನೆಗಳಿಗೆ ಅಗೌರವ ತೋರುವ ಮನೋಸ್ಥಿತಿ ಇಂದು ದೇಶದಲ್ಲಿ ನಿರ್ಮಾಣಗೊಳ್ಳತೊಡಗಿದೆ. ಬಡತನ-ನಿರುದ್ಯೋಗ-ಅನಕ್ಷರತೆ ಮತ್ತು ಅಜ್ಞಾನದಿಂದ ಜ್ಞಾನದೆಡೆ ಸಾಗಬೇಕಾದ ಮುಖ್ಯ ಹಾದಿಯಿಂದ ಬೇರೊಂದು ಹಾದಿಯಲ್ಲಿ ನಾವಿಂದು ಸಾಗುತ್ತಿದ್ದೇವೆ. ೨ಜಿ ಸ್ಪೆಕ್ಟ್ರಂ-ಕಾಮನ್ ವೆಲ್ತ್ ಗೇಮ್ - ಅಕ್ರಮ ಗಣಿಗಾರಿಕೆ-ಕಲ್ಲಿದ್ದಲು ಹಂಚಿಕೆ- ಪ್ರಶ್ನೆಗಾಗಿ ನೋಟು... ಮುಂತಾದ ಭ್ರಷ್ಟಾಚಾರದಂತಹ ಹಗರಣಗಳು ನಮ್ಮೊಳಗಿನ ನೈತಿಕ ನಿಷ್ಠೆಯನ್ನು ಪ್ರಶ್ನಿಸುವಂತದ್ದಾಗಿದೆ. ಭಯೋತ್ಪಾದನೆಯ ಹೆಸರಿನಲ್ಲಿ ನಡೆಯುತ್ತಿರುವ ಹಿಂಸಾಚಾರಗಳು ದೇಶವನ್ನೇ ಬೆಚ್ಚಿ ಬೀಳಿಸಿದೆ. ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿಯೂ ವ್ಯಾಪಿಸುತ್ತಿರುವ ಅನೈತಿಕತೆ ನೆನಪಿಸಿಕೊಂಡರೆ ಭವಿಷ್ಯದ ಭಾರತ ಯಾವ ಸ್ವರೂಪ ಪಡೆಯಬಹುದೆಂಬ ಭಯ ಅಂತರಂಗದಲ್ಲಿ ಮೂಡುತ್ತದೆ.

‘ಸಳಿತ ಎಂದರೆ ಆಕರ್ಷಣೆಯಲ್ಲಿ ಸೃಜನಶೀಲತೆ, ಚಲನಶೀಲತೆ, ಮಾನವತಾವಾದದ ಸಳಿತ ಬಸವಣ್ಣನಲ್ಲಿತ್ತು’
- ಪೂಜ್ಯ ಶ್ರೀ ಮುರುಘಾಶಿವಮೂರ್ತಿ ಶರಣರು





ಪರಮಪವಿತ್ರ ಕ್ಷೇತ್ರವಾದ ರಾಜಕೀಯ ತನ್ನೊಳಗೆ ಹುದುಗಿಸಿಕೊಂಡಿರುವ ಮುಖ್ಯ ಧ್ಯೇಯೋದ್ದೇಶಗಳನ್ನು ಸಂಪೂರ್ಣವಾಗಿ ಮರೆತಿದೆ. ಹಣ-ಜಾತಿ- ಧರ್ಮ ಮತ್ತು ಅಹಂಕಾರದಿಂದ ಪ್ರಜಾಪ್ರಭುತ್ವ ತತ್ವಗಳನ್ನು ಕೊಂಡುಕೊಳ್ಳಬಹುದೆಂಬ ಮನೋಸ್ಥಿತಿ ಪ್ರಸ್ತುತ ಸಮಾಜದಲ್ಲಿ ನಿರ್ಮಾಣಗೊಳ್ಳತೊಡಗಿದೆ. ಪ್ರತಿ ೫ ವರ್ಷಗಳಿಗೊಮ್ಮೆ ಜರುಗುವ ಚುನಾವಣೆ ಅನೈತಿಕ ಮಾರ್ಗ ತುಳಿದಿದೆ. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸತ್ಯ -ಅಹಿಂಸೆ ಮತ್ತು ಪ್ರಾಮಾಣಿಕತೆಯ ತತ್ವ ಮೌಲ್ಯಗಳಿಗೆ ಮನ್ನಣೆ ಕಾಣಸಿಗದೆ ಪ್ರಜಾಪ್ರಭುತ್ವವನ್ನೇ ಅಣಕಿಸುವಂತಿದೆ. ಜಗತ್ತಿಗೆ ಆದರ್ಶ ಪ್ರಜಾಪ್ರಭುತ್ವ ರಾಷ್ಟ್ರ ಎನಿಸಿಕೊಂಡಿರುವ ಭಾರತ ಪ್ರಜಾಪ್ರಭುತ್ವದ ತತ್ವಗಳನ್ನು ಮರೆತಿರುವುದು ನಿಜಕ್ಕೂ ಉತ್ತಮ ಬೆಳವಣಿಗೆಯ ಲಕ್ಷಣವಲ್ಲ.

ಸ್ವಾರ್ಥ ರಾಜಕೀಯ ಮತ್ತು ಮನಸ್ಸಿನೊಳಗಿರುವ ಸ್ವಾರ್ಥತನದಿಂದ ಇಂದು ನಾವು ನಮ್ಮ ಅಮೂಲ್ಯವಾದ ನೈಸರ್ಗಿಕ ಸಂಪತ್ತನ್ನು ಕಳೆದುಕೊಳ್ಳುತ್ತಿದ್ದೇವೆ. ಸ್ವಾತಂತ್ರ್ಯ ಪೂರ್ವದಲ್ಲಿ ಈಸ್ಟ್ ಕಂಪನಿ ಒಂದರಿಂದ ನಾವು ನಮ್ಮೊಳಗಿನ ಅಂತಃಸತ್ವವನ್ನು ಕಳೆದುಕೊಂಡಿದ್ದೆವು. ಇಂದು ಜಾಗತೀಕರಣದ ಹೆಸರಿನಲ್ಲಿ ನೂರಾರು ಕಂಪನಿಗಳಿಗೆ ಮುಕ್ತ ಅವಕಾಶ ನೀಡಿ ದೇಶದ ಸನಾತನ ತತ್ವ ಮೌಲ್ಯಗಳ ಸಂಸ್ಕೃತಿಗೆ ಕುಂದು ತಂದುಕೊಂಡಿದ್ದೇವೆ. ಚಿಲ್ಲರೆ ವ್ಯಾಪಾರಕ್ಕೆ ವಿದೇಶಿ ನೇರ ಬಂಡವಾಳ (F.D.I.)ಕ್ಕೆ ಅವಕಾಶ ನೀಡಿರುವುದು ಎಷ್ಟು ಸರಿ ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿದೆ. ರಕ್ಷಣಾ ಕ್ಷೇತ್ರಕ್ಕೂ ಎಫ್.ಡಿ.ಐ.ನ್ನು ವಿಸ್ತರಿಸಿರುವುದು ನಿಜಕ್ಕೂ ದುರದೃಷ್ಟಕರ ಸಂಗತಿ ಎನ್ನದೇ ವಿಧಿಯಿಲ್ಲ. ಸಾಲಮುಕ್ತ ರಾಷ್ಟ್ರವನ್ನಾಗಿಸಬೇಕೆಂಬ ಪರಿಕಲ್ಪನೆ ಇಲ್ಲದೇ ಅಧಿಕಾರದಾಸೆಗಾಗಿ ರಾಜಕೀಯ ಪಕ್ಷಗಳು ಬಡವರಿಗಾಗಿ ರೂಪಿಸುವ ವಿನೂತನ ಯೋಜನೆಗಳಿಗೆ ಜಾಗತಿಕ ಮಟ್ಟದಲ್ಲಿ ಯಾವ ಅರ್ಥ ಉಂಟೆಂದು ಆತ್ಮಾವಲೋಕನ ಮಾಡಿಕೊಳ್ಳಬೇಕಿದೆ. ಇಂತಹ ಯೋಜನೆಗಳಿಂದ ಜಾಗತಿಕ ಮಟ್ಟದಲ್ಲಿ ಭಾರತದ ಗೌರವ ಏನಾಗಬಹುದೆಂದು ಚಿಂತಿಸುವ ವ್ಯವಧಾನ ಸಹ ನಮ್ಮ ರಾಜಕೀಯ ಮುಖಂಡರಿಗೆ ಇಲ್ಲದಿರುವುದು ವಿಷಾದನೀಯ ಸಂಗತಿ.

‘ಒಬ್ಬ ಸ್ತ್ರೀ ನಡುರಾತ್ರಿ ದೇಶದಲ್ಲಿ ನಿರ್ಭಯವಾಗಿ ಸಂಚರಿಸುವಂತಹ ಅವಕಾಶ ಬಂದಾಗ ಮಾತ್ರ ನಿಜವಾದ ಸ್ವಾತಂತ್ರ್ಯ’ ಎಂದು ಸದಾ ಜಪಿಸುತ್ತಿದ್ದ ಮಹಾತ್ಮಗಾಂಧೀಜಿಯವರ ಕನಸು ಇಂದು ಬಹುದೂರವೇ ಉಳಿದಿದೆ. ಸ್ತ್ರೀಯನ್ನು ದೇವತೆಯಂತೆ ಪೂಜಿಸಿದ ಪವಿತ್ರ ಭರತಭೂಮಿಯಲ್ಲಿ ನಿರಂತರವಾಗಿ ನಡೆಯುತ್ತಿರುವ ಅಮಾನುಷವಾದ ಅತ್ಯಾಚಾರದಂತಹ ಪ್ರಕರಣಗಳು ನಮ್ಮ ಅಂತಃಸ್ಸಾಕ್ಷಿಯನ್ನೇ ಪ್ರಶ್ನಿಸುತ್ತಿದೆ. ಭೌತಿಕ ಕಟ್ಟಡ ಮತ್ತು ಯಂತ್ರೋಪಕರಣಗಳಿಂದ ದೇಶವನ್ನು ಭೌತಿಕವಾಗಿ ಕಟ್ಟುವುದರ ಜೊತೆ ದೇಶವನ್ನು ಸಾಂಸ್ಕೃತಿಕವಾಗಿ ಕಟ್ಟಬೇಕೆಂಬ ವಿಚಾರದಲ್ಲಿ ನಾವಿಂದು ವಿಫಲರಾಗಿದ್ದೇವೆ. ಸಂಸ್ಕೃತಿ ನಿರ್ಮಾಣ ಕಾರ್ಯದಲ್ಲಿ ನಮ್ಮೆಲ್ಲ ಧರ್ಮದ ಗುರುಗಳ ಪ್ರಾಮಾಣಿಕ ಪರಿಶ್ರಮ ಅತ್ಯಂತ ಅಗತ್ಯ ಎಂಬುದನ್ನು ಧರ್ಮ ಗುರುಗಳು ಮರೆಯಬಾರದು. ಸಂಸ್ಕೃತಿ ನಿರ್ಮಾಣಕಾರ್ಯದಲ್ಲಿ ಸಮಾಜದ ಎಲ್ಲಾ ಕ್ಷೇತ್ರದ, ಪ್ರಾಜ್ಞರುಗಳ ಕಾಳಜಿ ಪ್ರತಿಯೊಂದು ಸಂದರ್ಭದಲ್ಲಿಯೂ ಅಗತ್ಯವಾಗಿದೆ. ಆ ದಿಕ್ಕಿನಲ್ಲಿ ಎಲ್ಲರು ಕ್ರಿಯಾತ್ಮಕವಾಗಿ ಚಿಂತಿಸುವುದು ಅತ್ಯಂತ ಅಗತ್ಯವಾಗಿದೆ.

ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ನಾವಿಂದು ರಾಷ್ಟ್ರೀಯ ಪ್ರಜ್ಞೆಯ ಜಾಗೃತಿಗಾಗಿ ಬಳಸಿಕೊಳ್ಳುವ ಅನಿವಾರ್ಯತೆ ಇದೆ. ಸ್ವಾತಂತ್ರ್ಯ ಹೋರಾಟದ ಪ್ರತಿಯೊಂದು ಹೆಜ್ಜೆ ಗುರುತುಗಳು ನಮಗೊಂದು ಪಾಠದ ಜೊತೆ ಎಚ್ಚರಿಕೆಯನ್ನು ನೀಡಿದೆ. ಸ್ವಾತಂತ್ರ್ಯ ಎಂದರೆ ಸ್ವೇಚ್ಛಾಚಾರವಲ್ಲ, ಅಥವಾ ಮನಸ್ಸಿಗೆ ಬಂದಂತೆ ನಡೆಯುವುದಲ್ಲ ಎಂಬುದನ್ನು ನಮ್ಮ ಇಂದಿನ ಯುವ ಜನತೆ ತಿಳಿಯಬೇಕು. ಸ್ವಾತಂತ್ರ್ಯ ಸ್ವಾರ್ಥ ಸಾಧನೆಗೆ ಅವಕಾಶ ನೀಡದೇ ಸಹಬಾಳ್ವೆ-ಸಹಕಾರ-ಭ್ರಾತೃತ್ವ-ಸಮರಸ ಬಾಳ್ವೆಗೆ ನಾಂದಿಯಾಗ ಬೇಕು. ತ್ಯಾಗ ಬಲಿದಾನಗಳ ಅಭಿವ್ಯಕ್ತರೂಪದಲ್ಲಿರುವ ಸ್ವಾತಂತ್ರ್ಯವನ್ನು ನಾವು ಬಹು ಜಾಗರೂಕತೆಯಿಂದ ರಕ್ಷಿಸಿಕೊಳ್ಳಬೇಕೆಂಬ ಕರ್ತವ್ಯ ಪ್ರಜ್ಞೆ ನಮ್ಮ ಸ್ವಾತಂತ್ರ್ಯ ಹೋರಾಟದ ಇತಿಹಾಸ ಮತ್ತು ಸ್ವಾತಂತ್ರ್ಯೋತ್ಸವ ನೆನಪಿಸಬೇಕು. ಆ ದಿಕ್ಕಿನಲ್ಲಿ ನಮ್ಮ ಸ್ವಾತಂತ್ರ್ಯದ ಆಚರಣೆ ಸಾಗಿದರೆ ನಿಜಕ್ಕೂ ಸ್ವಾತಂತ್ರ್ಯ ದಿನಾಚರಣೆಗೊಂದು ಅರ್ಥ ಮೂಡುತ್ತದೆ ಎಂದು ಭಾವಿಸಬಹುದು. ✫

‘ಪುರಾಣಗಳು ಭಾರತೀಯ ಸಂಸ್ಕೃತಿ ವಿಚಾರಗಳ ವಿಶ್ವಕೋಶವೆನ್ನಬಹುದು’
- ವಿದ್ವಾನ್ ತೋಟಗಾನಹಳ್ಳಿ ಸುಬ್ರಹ್ಮಣ್ಯ

# ಮಹಾಮನೆಯ ಮಹಾನ್ ಮಹಿಳೆ ಗಂಗಾಂಬಿಕೆ

-ಯು.ಎನ್. ಸಂಗನಾಳಮಠ *

*'ಸತಿಯಾಜ್ಞೆಯಲ್ಲಿ ಚರಿಪ ಪತಿಗ್ಯಾಕೆ ಪ್ರತಿಜ್ಞೆಯು?*
*ಸತಿಯಾಜ್ಞೆಯ ಪತಿಕರದಲ್ಲಿ ಪೋಪದಿರೆ*
*ಯಾತನೆಯಲ್ಲವೇ?*
*ಇವಳ ಲಿಂಗ ನಿಷ್ಠೆ ಪತಿಯಾಜ್ಞೆಯಲ್ಲಿ ಕಾಣಾ*
*ಗಂಗಾಪ್ರಿಯ ಕೂಡಲಸಂಗಮದೇವಾ*

ಪತಿಯಾಜ್ಞೆ ಪಾಲನೆಯಲ್ಲಿ ನಿಷ್ಠೆಯನ್ನಿಟ್ಟು ನಡೆದ ಪತಿಭಕ್ತೆ ಸಂಪನ್ನೆ ಗಂಗಾಂಬಿಕೆ. ಬಸವಣ್ಣನವರ ಜೀವನದಲ್ಲಿ ಮೂವರು ಸ್ತ್ರೀಯರು ಕುಟುಂಬದ ಸದಸ್ಯರಾಗಿ ಅವರ ಜೀವನದ ಎಲ್ಲ ಚಟುವಟಿಕೆಗಳಲ್ಲಿ ಕ್ರಿಯಾತ್ಮಕವಾಗಿ ಇರುತ್ತಾರೆ ಅಕ್ಕನಾಗಮ್ಮ, ಸತಿಯರಾದ ಗಂಗಾಂಬಿಕೆ-ನೀಲಾಂಬಿಕೆ ಬಾಲ್ಯದಿಂದಲೇ ಬಸವಣ್ಣನಿಗೆ ಅರಿವಿನ ಬೆಳಕನ್ನು ಹೊತ್ತಿಸಿದ ಅಕ್ಕನಾಗಮ್ಮ, ಭಾವಲಿಂಗ; ಬಸವಣ್ಣನಿಗೆ ಪ್ರಾಣಶಕ್ತಿಯಾದ ಗಂಗಾಂಬಿಕೆ ಪ್ರಾಣಲಿಂಗ; ಇಚ್ಛಾಶಕ್ತಿಗೆ ಕಾರ್ಯ ಚಟುವಟಿಕೆ ಗಳಿಗೆ ಪ್ರೇರೇಪಣಾ ಶಕ್ತಿಯಾದ ನೀಲಾಂಬಿಕೆ ಇಷ್ಟಲಿಂಗ.

ಗಂಗಾಂಬಿಕೆ ಬಿಜ್ಜಳ ಅರಸನ ಮಹಾಮಂತ್ರಿ ಬಲದೇವನ ಮಗಳು. ಈ ಬಲದೇವ ಬಸವಣ್ಣನ ತಾಯಿಯ ಸೋದರ. ಬಸವಣ್ಣನಿಗೆ ಸೋದರ ಮಾವ. ಬಸವಣ್ಣನ ಅಪಾರ ಪಾಂಡಿತ್ಯ, ಸಂಘಟನಾ ಶಕ್ತಿಯಿಂದ ಹೆಮ್ಮೆ ಹೊಂದಿ ಬಲದೇವರಸ ತಾನಿರುವ ಮಂಗಳವೇಢೆಗೆ ಬರಮಾಡಿ ಕೊಂಡದ್ದು ಒಂದು ವಿಶೇಷ ಘಟನೆ ಆಯಿತು. ಭಂಡಾರದ ತಪ್ಪಿದ ಲೆಕ್ಕವನ್ನು ಬಸವಣ್ಣ ಸರಿಪಡಿಸಿದ್ದರ ತೀಕ್ಷ್ಣಮತಿ ಬಲದೇವ ತನ್ನ ಮಗಳನ್ನು ಧಾರೆ ಎರೆದ. ಬಲದೇವನ ಮರಣಾನಂತರ ಬಸವಣ್ಣ ಮಹಾಮಂತ್ರಿಯಾದ.

ಗಂಗಾಂಬಿಕೆ ಬಗ್ಗೆ ಹರಿಹರ, (ಬಸವರಾಜದೇವರ ರಗಳೆ) ಭೀಮಕವಿ, ನಂಜುಂಡದೇವ, ಸಿದ್ಧನಂಜೇಶ, ಸಿಂಗಿ ರಾಜ, ವಿರೂಪಾಕ್ಷ ಪಂಡೀತ, ಚನ್ನಪ್ಪ ಕವಿಯ ಶರಣಾಮೃತ ಎಲ್ಲ ಕವಿಗಳು ಸಂದರ್ಭಾನುಸಾರವಾಗಿ ವಿಷಯ ಪ್ರಸ್ತಾಪಿಸಿದ್ದಾರೆ. ಲಕ್ಷ್ಮಣದಂಡೇಶ ಬಸವನ 'ಚಿತ್ತದನು ಗುಣದ ಸತಿ'ಯಾಗಿದ್ದಳೆಂದು ಭೀಮಕವಿ 'ಸತಿಭಕ್ತಿ ಸಂಪನ್ನೆ ಮೂಜಂಗಗಳ ಚನ್ನೆ' ಎಂದು ವರ್ಣಿಸಿದ್ದಾರೆ.

ಗಂಗಾಂಬಿಕೆ 'ಗಂಗಾಪ್ರಿಯ ಕೂಡಲಸಂಗಮದೇವ' ಎಂಬ ಅಂಕಿತದೊಂದಿಗೆ ಒಂಭತ್ತು ವಚನಗಳು ಮಾತ್ರ ದೊರೆತಿವೆ. ಅವಳ ವಚನಗಳ ಒಪ್ಪ, ಬದ್ಧತೆ, ವಿಮರ್ಶಾತ್ಮಕ ಗುಣ ಇತ್ಯಾದಿ ಗಮನಿಸಿದರೆ ಗಂಗಾಂಬಿಕೆ ಇನ್ನೂ ಅನೇಕ ವಚನಗಳನ್ನು ಬರೆದಿರಬಹುದು. ಅವೆಲ್ಲ ಕಾಲನ ದಾಳಿಗೆ ತುತ್ತಾಗಿರಬಹುದು ಅಥವಾ ವೈರಿಗಳು ಬೆನ್ನಟ್ಟಿದಾಗ ಸೈನ್ಯದ ಕೈಗೆ ಸಿಕ್ಕಿ ನಾಶವಾಗಿರಬಹುದು ಅಥವಾ ಸಾಂಸಾರಿಕ ಜವಾಬ್ದಾರಿ ಹೊಂದಿದ್ದರಿಂದ ಇಷ್ಟೇ ವಚನಗಳನ್ನು ರಚಿಸಿರ ಬಹುದು. ಏಕೆಂದರೆ ಬಹಳ ವಚನಗಳ ಸ್ಥಾಯಿಭಾವ, ತಾಯ್ತನದ ನೋವು, ಸತ್ಯಸದಾಚಾರದ ನಿಲುವು, ಪತಿಭಕ್ತಿ. ಗಂಗಾಂಭಿಕೆಗೆ ಮಕ್ಕಳಾಗಲಿಲ್ಲ. ಬಸವಣ್ಣನವರ ಆದೇಶದಂತೆ ಅಕ್ಕನಾಗಮ್ಮನವರ ಮಗ ಚೆನ್ನಬಸವಣ್ಣನನ್ನೇ ತನ್ನ ಮಗನೆಂದು ಪರಿಭಾವಿಸಿಕೊಂಡು ತನ್ನ ತಾಯ್ತನ ನೋವನ್ನು ಮರೆತಿದ್ದಳು. ನೀಲಾಂಬಿಕೆ ಉದರದಲ್ಲಿ ಬಾಲಸಂಗಯ್ಯ ಎಂಬ ಮಗು ಜನನವಾಗುತ್ತದೆ. ಅಲ್ಪಕಾಲದಲ್ಲಿ ಮರಣಿಸಿ ದಾಗ ಗಂಗಾಂಬಿಕೆಯ ಶೋಕ ವ್ಯಕ್ತವಾಗಿದೆ.

*'ಇದೇನೋ ಮೀರಿ ತೋರುವ ಮೂರುತಿ*
*ಕರದಲ್ಲಿಯ ಲಿಂಗದಂತೆ ಉಲುಹದ ಸ್ಥಿತಿ ತೋರುತ್ತದೆ'*
*'ನಮ್ಮಯ್ಯನ ಮನದಲ್ಲಿ ಮಾತಿನಲ್ಲಿ ಸೂಸುವ*
*ಮೂರ್ತಿ ನೋಡ ನೋಡುತ್ತ ಬಯಲಾಯಿತಲ್ಲ'*
*'ಒಂದು ಹಾಳು ಭೂಮಿಯ ಹುಲಿ ಬಂದು*
*ಎನ್ನ ಎಳೆಗರುವ ಭಕ್ಷಿಸಿತ್ತಲ್ಲಾ'*

* 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ, ನೇ ಒಳತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ.

'ಭಾರತ ಪರಧರ್ಮ ಸಹಿಷ್ಣುತೆಗೆ ಹೆಸರುವಾಸಿಯಾದ ದೇಶ' - ಜಿ. ಹನುಮಂತರಾವ್





ಎಂಬ ಮಾತುಗಳಲ್ಲಿ ಮರಣಿಸಿದ ಮಗುವಿನ ಚಿತ್ರಣ ಕಾಣುವೆವು.

*ಅವಳ ಕಂದ ಬಾಲಸಂಗ*
*ನಿನ್ನ ಕಂದ ಚೆನ್ನಲಿಂಗ*
*ಎಂದು ಹೇಳಿದರಯ್ಯ ಎನ್ನ ಒಡೆಯರು*
*ಫಲವಿದ್ದ ಕಂದನಿರ್ಪನವಳಿಗೆ*
*ಎನಗೆ ಫಲವಿಲ್ಲ ಕಂದನಿಲ್ಲ*
*ಇದೇನೋ ದುಃಖ ದುಂದುಗ*
*ಗಂಗಾಪ್ರಿಯ ಕೂಡಲಸಂಗಮದೇವಾ'*

ಎನ್ನುವಲ್ಲಿ ಅಗಲಿದ ಪುತ್ರನನ್ನು ಅಂಗೈಲಿಂಗದಲ್ಲಿ ಕಾಣಲು ಬಸವಣ್ಣ ಸಮಾಧಾನ ಹೇಳುತ್ತಾನೆ. (ಬಸವಕಲ್ಯಾಣದಿಂದ ೫ ಕಿ.ಮೀ. ದೂರದಲ್ಲಿರುವ ಬೇಟ ಬಾಲಕುಂಡದಲ್ಲಿ ಬಾಲ ಸಂಗಯ್ಯನ ಸಮಾಧಿ ಇದೆ. ಇದನ್ನು ಬಾಲಕಂದನ ಬೆಟ್ಟ ಎಂದು ಕರೆಯುತ್ತಾರೆ) ಅದಕ್ಕಾಗಿ ಚೆನ್ನಬಸವಣ್ಣನನ್ನು ಕೊನೆಯವರೆಗೂ ರಕ್ಷಿಸಿದಳು ಆದರೆ ಚೆನ್ನಬಸವಣ್ಣನೂ ಉಳವಿಯಲ್ಲಿ ಇಲ್ಲದಾದಾಗ ಆ ಮಾತೃಹೃದಯ ತಲ್ಲಣ ಹೊಂದುತ್ತದೆ.

*'ಲಿಂಗ ಕುಸುಮಗಳೆನ್ನಾಚಾರ ಲಿಂಗಕ್ಕಿಡಿಯೆ ಚೆನ್ನ*
*ಲಿಂಗವಸನದಂತರಂಗವಸನ ತರಿಸಿದೆಯೆ ಚೆನ್ನ*
*ಲಿಂಗದರ್ಚನೆಗುದಕವ ತರಪೋದೆಯೇ ಚೆನ್ನ*
*ಲಿಂಗನಿಮಿತ್ತಕುಸುಮಾರಾಮ ವಿರಚಿಸ ಹೋದೆಯೇ ಚೆನ್ನ*
*ಬಸವಯ್ಯನಾಚರಣೆ ಸೊಗಸದಾಗಿ ಹೋದೆಯ*
*ಗಂಗಾಪ್ರಿಯಕೂಡಲಸಂಗಚೆನ್ನ'*

ಎಂದು ಆ ತರುಣನ ಅಗಲುವಿಕೆಯನ್ನು ಸಹಿಸದಾದಳು. ತಮ್ಮ ಪತಿ ಬಸವಣ್ಣನವರ ಬಗ್ಗೆ

*'ಸಾಂದ್ರವಾಗಿ ಹರಗಣ ಭಕ್ತಿಯ ನೋಳ್ಪನೆಂತೋ*
*ಮಾದಲಾಂಬಿಕಾ ನಂದನನು ?*
*ಸಾಂದ್ರವಾಗಿ ಬಿಜ್ಜಳನರಮನೆಯ*
*ನ್ಯಾಯ ನೋಳ್ಪನೆಂತೋ ?*
*ಮಾದರಸನ ಮೋಹದ ಮಗನು ?*
*ಗಂಗಾಪ್ರಿಯ ಕೂಡಲಸಂಗನ ಶರಣ ಚೆನ್ನ'*

ಈ ವಚನದಲ್ಲಿ ಬಸವಣ್ಣನವರ ಬಗ್ಗೆ ೩ ಅಂಶಗಳು ಸ್ಪಷ್ಟವಾಗಿವೆ. ೧) ಮಾದಲಾಂಬಿಕಾ ತಾಯಿಯ ಮಗನು ೨) ಬಿಜ್ಜಳನ ಅರಮನೆಯಲ್ಲಿ ಮಂತ್ರಿ ೩) ಹಗರಣ ಭಕ್ತಿ ಕಾರ್ಯವನ್ನು ಮಾಡುತ್ತಿದ್ದರು.

ಕಲ್ಯಾಣ ಕ್ರಾಂತಿಯ ನಂತರ ಬಸವಣ್ಣನವರು ಕಪ್ಪಡಿ ಸಂಗಮಕ್ಕೆ ಹೊರಟರು. ಗಂಗಾಂಬಿಕೆ ಅಲ್ಲಿಯೇ ಉಳಿದು, ಎಲ್ಲ ಶರಣರು ತಂಡೋಪತಂಡವಾಗಿ ರಾಜ್ಯದಿಂದ ಕಾಲ್ತೆಗೆದ ಒಂದು ಗುಂಪಿನೊಂದಿಗೆ ಅತ್ತಿಗೆ ಅಕ್ಕನಾಗಮ್ಮ ಅಳಿಯ ಚೆನ್ನಬಸವಣ್ಣನೊಂದಿಗೆ ಉಳಿವೆಯತ್ತ ಗಂಗಾಂಬಿಕೆ ಹೊರಟಳು. ಕಾದ್ರೊಳ್ಳಿ ಘೋರ ಕಾಳಗದಲ್ಲಿ ಕಾದಿ, ನಂತರ ಅಲ್ಲಿಂದ ಮೂರು-ನಾಲ್ಕು ಮೈಲುಗಳ ಅಂತರದಲ್ಲಿ ಇರುವ ಈಗಿನ ಮುಗುಟಖಾನ ಹುಬ್ಬಳ್ಳಿಯಲ್ಲಿ ಐಕ್ಯಳಾದಳು ಎಂದು ಶ್ರೀ ಹಳಕಟ್ಟಿಯವರು ಅಭಿಪ್ರಾಯ ಪಟ್ಟಿದ್ದಾರೆ. ಬೆಳಗಾಂ ಜಿಲ್ಲೆಯ ಮುಗುಟಖಾನ ಹುಬ್ಬಳ್ಳಿ ಪಕ್ಕದಲ್ಲಿ ಹರಿಯುವ ಮಲಪ್ರಭಾನದಿಯ ಮಧ್ಯದಲ್ಲಿ ಸಮಾಧಿ ಇದೆ. ಈ ಸಮಾಧಿಗೆ ರಕ್ಷಣಾ ಗೋಡೆ ನಿರ್ಮಾಣವಾಗುತ್ತಲಿದೆ.

ಈ ಶಿವಶರಣೆ ಪತಿಭಕ್ತಿಯೊಂದಿಗೆ ಸಾಂಸಾರಿಕ ಜೀವನವನ್ನು ಉತ್ತಮವಾಗಿ ನಿರ್ವಹಿಸಿ ನಂತರ ಕೊನೆಯ ಘಟ್ಟವಾದ ಸಾಹಿತ್ಯ ರಕ್ಷಣಾ ಕಾರ್ಯದಲ್ಲಿ ನಿರತಳಾಗಿ, ಅದೇ ಕಾರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿ ಬಲಿದಾನ ಹೊಂದಿದ ಮಹಾಮಾತೆ. ಕಲ್ಯಾಣದ ಮಹಾಮನೆಯ ಮಹಾನ್‌ಸ್ತ್ರೀ.

*'ಇದೇನೋ ಮೀರಿ ತೋರುವ ಮೂರ್ತಿ*
*ಪುಷ್ಪಗುಂಪಿನಲ್ಲಿ ಕಾಣದೆ ಹೋಗಿದೆ?*
*ಇದೇನೋ ಮೀರಿ ತೋರುವ ಮೂರ್ತಿ*
*ಕರದಲ್ಲಿಯ ಲಿಂಗದಂತೆ ಉಲುಹದ ಸ್ಥಿತಿ ತೋರುತ್ತದೆ*
*ಇಂತಪ್ಪ ಮೂರ್ತಿಯ ಕಂಡು*
*ಗಂಗಾಪ್ರಿಯ ಕೂಡಲಸಂಗನ ಶರಣನ ಸತಿಯಳು*
*ಧನ್ಯಳಾದಳಾ ಚೆನ್ನಬಸವಣ್ಣ'.*

☆

'ವೇದವು ಪರಮಾತ್ಮನ ನಿಶ್ವಾಸ ರೂಪವಾಗಿದೆ, ಆಗಮಗಳು ವಾಣೀರೂಪಗಳಾಗಿವೆ' -ಕೃಷ್ಣದೀಕ್ಷಿತ

## ಅಂಧರ ಬಾಳಿಗೆ ಬೆಳಕಾದ ಅಶ್ವಿನಿಗೆ ವಿಶ್ವಸಂಸ್ಥೆಯಿಂದ ಪ್ರತಿಷ್ಠಿತ ಗಾರ್ಡನ್ ಬ್ರೌನ್ ಯುವ ಸಾಧಕ ಪ್ರಶಸ್ತಿ

*
-ಶಶಿಧರ ಮೇಟಿ, ಕೃಪೆ : ಕನ್ನಡಪ್ರಭ



ವಿಶ್ವಸಂಸ್ಥೆಯ ಪ್ರತಿಷ್ಠಿತ ಗಾರ್ಡನ್ ಬ್ರೌನ್ ಯುವ ಸಾಧಕ ಪ್ರಶಸ್ತಿ ಪಡೆದ ಕು॥ ಅಶ್ವಿನಿ ಶ್ರೀಮಠಕ್ಕೆ ಬಂದು ಪೂಜ್ಯರ ದರ್ಶನಾಶೀರ್ವಾದ ಪಡೆದರು.

ಕಿತ್ತು ತಿನ್ನುವ ಬಡತನದಲ್ಲಿ ಕಣ್ಣೇ ಇಲ್ಲದ, ಅದರಲ್ಲೂ ಹೆಣ್ಣಾಗಿ ಹುಟ್ಟಿದರೆ ಪ್ರಸ್ತುತ ಸಮಾಜದಲ್ಲಿ ಹೇಗೆ ಜೀವನ ನಡೆಸುವುದು ಎಂಬ ಚಿಂತೆ ಹಲವರಲ್ಲಿ ಮನೆ ಮಾಡಿದೆ. ಆದರೆ ಇಲ್ಲಿ ಅದೇ ಅಂಧ ಹೆಣ್ಣುಮಗಳೊಬ್ಬಳು ತನ್ನ ಅಂಧತೆ ನಡುವೆಯೂ ಇಡೀ ಜಗತ್ತೇ ತನ್ನತ್ತ ತಿರುಗಿ ನೋಡುವಂತೆ ಮಾಡಿದ್ದಾಳೆ.

ಹೌದು... ಅಂಧ ಮಗಳು ಹುಟ್ಟಿದಳು ಎಂದು ವ್ಯಥೆ ಪಡುತ್ತಿದ್ದ ಹೋಟೆಲ್ ಮಾಣಿಯ ಮಗಳು ಇಂದು ವಿಶ್ವ ಸಂಸ್ಥೆಯ ಪ್ರಶಸ್ತಿಗೆ ಭಾಜನಳಾಗುವ ಮೂಲಕ ಅಂಧರು ಸಾಧನೆ ಮಾಡಬಲ್ಲರು ಎಂಬುದನ್ನು ಸಾಬೀತುಪಡಿಸಿದ್ದಾಳೆ. ಅಂತಹ ಸಾಧನೆ ಮಾಡಿ ವಿಶ್ವಸಂಸ್ಥೆಯ ಪ್ರತಿಷ್ಠಿತ ಗಾರ್ಡನ್ ಬ್ರೌನ್ ಯುವ ಸಾಧಕ ಪ್ರಶಸ್ತಿಗೆ ಭಾಜನಳಾದ ಅಶ್ವಿನಿ ಜೀವನದ ಹಿಂದೆ ಕಣ್ಣೀರಿನ ಕಥೆ ಇಲ್ಲಿದೆ.

ರಾಜ್ಯದ ಗಡಿಗೆ ಹೊಂದಿ ಕೊಂಡ ಬಳ್ಳಾರಿ ತಾಲ್ಲೂಕಿನ ಚೇಳ್ಳಗುರ್ಕಿ ಗ್ರಾಮದ ಪ್ರಕಾಶ್ ಅವರಿಗೆ ಕಿತ್ತು ತಿನ್ನುವ ಬಡತನ. ೧೯೮೦ರ ಅವಧಿಯಲ್ಲಿ ಉಟ್ಟ ಬಟ್ಟೆಯಲ್ಲೇ ಯಾರಿಗೂ ಹೇಳದೆ ಗೇಣು ಹೊಟ್ಟೆ ತುಂಬಿ ಕೊಳ್ಳಲು ಊರುಬಿಟ್ಟು ಬೆಂಗಳೂರಿಗೆ ಹೋದರು. ಕಲಿತಿದ್ದು ಕೇವಲ ಎಸ್‌ಎಸ್‌ಎಲ್‌ಸಿ, ಆತನ ಓದಿಗೆ ಬೆಂಗಳೂರಿನಲ್ಲಿ ಕೆಲಸ ಸಿಗುವುದೇ ಕಷ್ಟ. ಆ ಸಮಯದಲ್ಲಿ ಸುಮಾರು ೧ವರ್ಷ ಹೋಟೆಲ್ ನಲ್ಲಿ ಮಾಣಿಯಾಗಿ ಕೆಲಸ ಮಾಡಿ ಹೊಟ್ಟೆ ತುಂಬಿಸಿ ಕೊಳ್ಳುತ್ತಿದ್ದರು. ನಂತರ ಬಜಾರ್‌ನಲ್ಲಿ ಮಜ್ಜಿಗೆ ಮಾರಾಟ, ಬೀದಿ ಬದಿ ಹಣ್ಣು ಮಾರಾಟದ ಮೂಲಕ ತಮ್ಮ ಜೀವನದಲ್ಲಿ ಲಯ ಕಂಡುಕೊಂಡರು.

**ವ್ಯಥೆ ಪಟ್ಟ ಪೋಷಕರು :** ೧೯೮೬ರ ಅವಧಿಯಲ್ಲಿ ಪ್ರಕಾಶ್ ವಿವಾಹವಾದರು. ಬಡತನದಲ್ಲೂ ತಂದೆ, ತಮ್ಮಂದಿರನ್ನು ಸಾಕುವ ಜವಾಬ್ದಾರಿ ಇವರ ಮೇಲಿತ್ತು. ಅದೇ ಸಂದರ್ಭ ಒಬ್ಬ ಮಗನ ತರುವಾಯ ಅಶ್ವಿನಿ ಹುಟ್ಟಿದ್ದಳು. ಆಕೆ ಹುಟ್ಟುತ್ತಲೇ ಅಂಧಳಾಗಿರುವ ವಿಷಯ ಕೇಳಿದ ಪ್ರಕಾಶ್ ದಂಪತಿಗೆ ಆಕಾಶವೇ ಮೇಲೆ ಬಿದ್ದಂತಾಯಿತು. ತಮಗೆ ದೇವರು ಕಿತ್ತು ತಿನ್ನುವ ಬಡತನದಲ್ಲೂ ಇಂತಹ ಪರೀಕ್ಷೆ ಒಡ್ಡಿದ್ದಾನೆ ಎಂದೆಲ್ಲ ಗೋಳಾಡಿದರು. ಹೆತ್ತವರಿಗೆ ಹೆಗ್ಗಣವೂ ಮುದ್ದು ಎನ್ನುವಂತೆ ಅಶ್ವಿನಿ ಎಂದರೆ ಪೋಷಕರಿಗೆ ಪ್ರೀತಿ ಇತ್ತು. ಇವಳ ಭವಿಷ್ಯದ ಜೀವನ ಹೇಗೆ ಎಂಬ ಚಿಂತೆ ಜೊತೆ ಬಡತನದಲ್ಲೇ ದಿನ ದೂಡುತ್ತಿದ್ದರು.

**ಎಲ್ಲವೂ ಮಗಳಿಗಾಗಿ :** ಎಲ್ಲ ವ್ಯಾಪಾರ ಮಾಡಿದ್ದ ಪ್ರಕಾಶ್ ಅವರು ಬಾಡಿಗೆ ಆಟೋ ಓಡಿಸುತ್ತಿದ್ದರು. ಪ್ರಕಾಶ್ ದಂಪತಿಗೆ ಯಾವಾಗಲೂ ಅಶ್ವಿನಿಯದ್ದೇ ಚಿಂತೆ, ಮಗಳಿಗೆ ೫ ವರ್ಷವಾಗಿದೆ ಎಲ್ಲ ಮಕ್ಕಳು ಶಾಲೆಗೆ ಹೋಗುತ್ತಾರೆ. ಮಗಳ ಶಿಕ್ಷಣ ಹೇಗೆ ಎಂಬ ಪ್ರಶ್ನೆ ಕಾಡುತ್ತಿತ್ತು. ಕೆಲವರ ಸಲಹೆಯಂತೆ ಬೆಂಗಳೂರಿನ ಜೆಪಿ ನಗರದ ರಮಣ ಮಹರ್ಷಿ ಬ್ಲೈಂಡ್ ಶಾಲೆಗೆ ಸೇರಿಸಿದರು. ಅಂದಿನಿಂದ ಆಕೆಯ ಶಿಕ್ಷಣ ಸುಗಮವಾಗಿ ಸಾಗಿತು. ಅಶ್ವಿನಿ ಕೂಡ ವಿದ್ಯಾಭ್ಯಾಸದಲ್ಲಿ ತಾನು ಎಲ್ಲರಿಗಿಂತ ಮುಂದು ಎನ್ನುವುದನ್ನು ೧೦ನೇ ತರಗತಿಯಲ್ಲಿ ಶೇ. ೮೩.೫೨ರಷ್ಟು ಅಂಕಗಳನ್ನು ಪಡೆದು ಸಾಧನೆ ತೋರಿದಳು. ಮಗಳು ಪಡೆದ ಅಂಕಗಳನ್ನು ಕಂಡ ಪ್ರಕಾಶ್‌ಗೆ ಮಗಳ ಪ್ರತಿಭೆ ನೋಡಿ ಹೇಗಾದರೂ ಮಾಡಿ, ಎಷ್ಟೇ ಖರ್ಚಾದರೂ ಸರಿ ಮಗಳಿಗೆ ಉನ್ನತ ಶಿಕ್ಷಣ ಕೊಡಿಸಬೇಕೆಂದು ಪಣ ತೊಟ್ಟರು.

**ಸಮಾಜ ಸೇವೆ :** ಎಸ್‌ಎಸ್‌ಎಲ್‌ಸಿ ನಂತರ ಬೆಂಗಳೂರಿನ ಎನ್‌ಎಂಕೆಆರ್‌ವಿ ಕಾಲೇಜಿನಲ್ಲಿ ಪಿಯುಸಿ ಕಲಾ ವಿಭಾಗದಲ್ಲಿ ಶೇ. ೬೫ರಷ್ಟು ಅಂಕ ಗಳಿಸಿದಳು. ಮುಂದೆ ಮಹಾರಾಣಿ ಕಾಲೇಜಿನಲ್ಲಿ ಶೇ. ೭೦.೬ರಷ್ಟು ಅಂಕದೊಂದಿಗೆ ಪದವಿ ಪೂರ್ಣಗೊಳಿಸಿದಳು. ತಂದೆ ಪ್ರಕಾಶ್ ಸ್ವಂತ ಆಟೋ ಖರೀದಿಸಿ, ನಂತರ ಟ್ರಾವೆಲ್ಸ್ ಬಿಸಿನೆಸ್‌ನೊಂದಿಗೆ ಜೀವನ ಸ್ವಲ್ಪ ಸುಧಾರಿಸಿತ್ತು. ಆಗ ಅಶ್ವಿನಿ ಪದವಿ ನಂತರ ಕಂಪ್ಯೂಟರ್ ತರಬೇತಿ ಪಡೆದು, ಸಾಫ್ಟ್‌ವೇರ್ ಕಂಪನಿಯಲ್ಲಿ ಕೆಲಸಕ್ಕೆ ಸೇರಿದಳು.

ಕಂಪನಿಯಲ್ಲಿ ಕೆಲಸ ಮಾಡಿದರೆ ಕೇವಲ ವೈಯಕ್ತಿಕ ಬದುಕು ಸುಧಾರಿಸುತ್ತದೆ. ಆದರೆ, ತನ್ನಂತಹ ಅಂಧರ, ಅಂಗವಿಕಲರಿಗೆ ಬೆಳಕಾಗಲು ಸಾಧ್ಯವಿಲ್ಲ ಎನ್ನುವ ಚಿಂತೆ ಆಕೆಯಲ್ಲಿ ಆಗ ಬೆಳೆದಿತ್ತು. ತಡ ಮಾಡದೇ ಲಿಯೋನಾರ್ಡ್ ಚೆಶೈರ್ ಡಿಸೆಬಿಲಿಟಿ ಸಂಸ್ತೆ ಸೇರಿ ಯಂಗ್ ವಾಯ್ಸ್‌ನ ಸದಸ್ಯೆಯಾದಳು. ಅಲ್ಲಿಂದ ಸ್ವತಃ ವಿವಿಧ ಕಾಲೇಜುಗಳಲ್ಲಿ ಅಂಗವಿಕಲರ ಹಕ್ಕುಗಳ ಬಗ್ಗೆ ಜಾಗೃತಿಗೊಳಿಸುವುದರೊಂದಿಗೆ ಸಮಾಜ ಸೇವೆಗೆ ಧುಮುಕಿದಳು. ಲಿಯೋನಾರ್ಡ್ ಚೆಶೈರ್ ಡಿಸೆಬಿಲಿಟಿ ಸಂಸ್ಥೆ ಕಚೇರಿ ಯುಕೆದಲ್ಲಿಯೂ ಇದೆ. ಅಶ್ವಿನಿಯ ಸಾಧನೆಯನ್ನು ಅಲ್ಲಿನ ಸಂಸ್ಥೆ ಮನಗಂಡು ವಿಶ್ವಸಂಸ್ಥೆಯ ಪ್ರತಿಷ್ಠಿತ ಗಾರ್ಡನ್ ಬ್ರೌನ್ ಯುವ ಸಾಧಕ ಪ್ರಶಸ್ತಿಗೆ ಅಶ್ವಿನಿಯನ್ನು ಆಯ್ಕೆ ಮಾಡಿ ಇದೀಗ ಪ್ರಶಸ್ತಿ ಪಡೆದಿದ್ದಾಳೆ. ಅಶ್ವಿನಿ ಎಂಬ ಸಾಧಕಿ ಇಂದು ತೋರಿರುವ ಸಾಧನೆ ಅಂಗವಿಕಲ ಮಕ್ಕಳ ಪೋಷಕರಿಗೆ ಸದಾ ಮಾದರಿ, ಆದರ್ಶವಾಗಿದ್ದಾಳೆ.

### ಶ್ರೀವಾಣಿ

ಶ್ರೇಷ್ಠ ಜೀವಿಯಾದ ಮಾನವನು ತನಗೆ ದೊರೆತಿರುವ ಅಲ್ಪಕಾಲದಲ್ಲಿಯೇ ತನ್ನ ಪವಿತ್ರ ಜೀವನವನ್ನು ಸಾರ್ಥಕಗೊಳಿಸಲು ಯತ್ನಿಸಬೇಕು. ಮಾನವನ ಉನ್ನತಿಯು ಅವನು ಮಾಡುವ ಕಾರ್ಯಗಳನ್ನು ಅವಲಂಬಿಸಿದೆ. ಆ ಕಾರ್ಯಗಳು ಸತ್‌ಕಾರ್ಯಗಳಾದರೆ, ವ್ಯಕ್ತಿಗೂ, ದೇಶಕ್ಕೂ ಕೂಡಿಯೇ ಹಿತವಾಗುತ್ತದೆ.

ಶಾಂತಿಯು ಎಲ್ಲಿ ಇರುತ್ತದೆ ಎಂದು ಕೇಳಿದ್ದಕ್ಕೆ ಪ್ರಖ್ಯಾತ ವಿಜ್ಞಾನಿ ಐನ್‌ಸ್ಟೀನನು ಅದು ನಿನ್ನಲ್ಲಿಯೇ ಇರುತ್ತದೆ ಎಂದು ಹೇಳಿದನಂತೆ - ನವಕಲ್ಯಾಣಮಠದ ಪೂಜ್ಯಶ್ರೀ ಕುಮಾರಸ್ವಾಮಿಗಳು





ವಚನ ಸಂಸ್ಕೃತಿಯ ಅತ್ಯಂತ ಮಹತ್ವದ ಕೊಡುಗೆಯೆಂದರೆ ಮಹಿಳೆಯರ ಕುರಿತಂತೆ ವಚನಕಾರರು ಮಾಡಿದ ಚಿಂತನೆ - ಟಿ.ಆರ್. ಚಂದ್ರಶೇಖರ್

# ಯುಗದ ಬೆಳಕು

ಎಲ್ಲರಂತೆ ಮೊಳೆಯಿತು
ಎಲ್ಲರಂತೆ ಬಲಿಯಿತು
ಎಲ್ಲರಂತೆ ಜನ್ಮತಳೆದು
ಭುವಿಗೆ ಬಂತು ಯುಗದ ಬೆಳಕು

ಜನಿಸಿದೊಡಲು ಜ್ಞಾನಗಂಗೆ
ಸ್ತನ್ಯಪಾನ ದಯಾಸಿಂಧು
ಬೆಳೆದ ನೆಲವು ಕರುಣೆಯೊಡಲು
ಸುತ್ತಸುಳಿದ ರವಿಯ ಕಿರಣ
ದಿವ್ಯ ತೇಜಪುಂಜವು

ಇಂತನೇಕವೇಕವಾಗಿ
ಶಿವಕುಮಾರಸ್ವಾಮಿಯೆನಿಸಿ
ಸಿದ್ಧಗಂಗೆಯಲ್ಲಿ ನೆಲಸಿ
ಪುಣ್ಯಕ್ಷೇತ್ರವಾಯಿತು,
ಅದುವೇ ಧರ್ಮಕ್ಷೇತ್ರವೆನಿಸಿತು.

ಅನ್ನ, ಅಕ್ಷರ, ವಸ್ತ್ರ, ವಸತಿಯ
ನೀಡತೆಲ್ಲರ ಪೊರೆಯುತ,
ದೀನ ದಲಿತ ಅನಾಥಮಕ್ಕಳ
ಕರುಣೆಯಿಂದಲಿ ಸಲಹುತ
ತಂದೆತಾಯಿಗಳಂತೆ ಅವರಲಿ
ಪ್ರೀತಿಮಮತೆಯ ತೋರುತೆಲ್ಲರ
ಬಾಳ ದಾರಿಗೆ ದೀಪದಂದದಿ
ಬೆಳಕ ನೀಡುವ ದಿವ್ಯಚೇತನ
ಮಹಾಮಹಿಮಗೆ ವಂದಿಪೆ.

ಒಂದೂ ದಾನವ ಮಾಡಲರಿಯದ
ಮಂದಿಯಿರುವೀಲೋಕದೊಳಗೆ,
ದಾನ ದಾನದಿ ಮಿಗಿಲು ಎನಿಸಿದ
ಜ್ಞಾನ ದಾನವ ನೀಡುತವರಿಗೆ
ಅನ್ನ ಬಟ್ಟೆಯನ್ನಿತ್ತು ಸಲಹುವ

ನಿತ್ಯ ಕಾಯಕಯೋಗಿ ಜಂಗಮ
ಸದ್ಗುರು ಸಂಪನ್ನ ಮೂರ್ತಿಯ
ಚರಣ ಕಮಲಕೆ ವಂದಿಪೆ.

ವರುಷ ಕಳೆದವು ನೂರಾಐದು
ಹುಟ್ಟಿ ಇಂದಿಗೆ ಶ್ರೀಗುರು,
ಮತ್ತೆ ನೂರನು ದಾಟಿ ಸಾಗಲಿ
ಸತ್ಯಸಂಧರು ಜಗದಲಿ
ಎಂಬ ಬಯಕೆಯ ಮನುಜರೆಲ್ಲರು
ತಮ್ಮ ಆಯುವಿನಲ್ಲೊಂದೊಂದು ದಿನವನು
ದಾರೆ ಎರೆಯಲಿ ದೈವಕೆ

ಅನ್ನದಾನಿ, ಜ್ಞಾನದಾನಿ, ತತ್ವಜ್ಞಾನಿ
ಸದಾಚಾರ ಸದ್ಗುರು ಸಂಪನ್ನ
ರಿವರ, ಇರುವು ಧರೆಗೆ ಶೋಭೆ,
ಇವರ ಇರುವು ದೇಶದೇಳ್ಗೆ,
ಇವರ ಇರುವು ಧರ್ಮದುಳಿವು,
ಇವರ ದಿವ್ಯತೇಜವಿರಲಿ
ಸೂರ್ಯ, ಚಂದ್ರರಂತೆ ಸದಾ
ಜನತೆಯನ್ನು ಪೊರೆಯಲು
ಜಗಕೆ ಬೆಳಕ ನೀಡಲು
ಜಾತಿಗಿಂತ ನೀತಿ ಮಿಗಿಲು
ಧರ್ಮದಲಿ ದಯವೆ ಮೊದಲು
ಎಂಬ ತತ್ವ ಉಳಿಯಲು.

ಬುದ್ಧ, ಬಸವ, ಗಾಂಧಿಮಾರ್ಗ
ಮಾನವತೆಯ ಮೂಲಮಂತ್ರ
ಎಂಬ ಅರಿವಿನಾಲಯದೊಳು
ಪ್ರಜ್ವಲಿಸುವ ದಿವ್ಯಮೂರ್ತಿ
ಅಗ್ರ ಪೂಜೆಗರ್ಹರಿವರು
ನಡೆದಾಡುವ ದೇವರು
ಶ್ರೀ ಶಿವಕುಮಾರ ಸದ್ಗುರು.

–ಹೆಚ್.ಎಸ್. ಶಿವಬಸಪ್ಪ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಹಾಸನ.





# ನೀರಿನ ಕುಯಿಲು ಅಥವಾ ಮಳೆನೀರಿನ ಸಂಗ್ರಹಣೆ ಮತ್ತು ಸದ್ಬಳಕೆ

–ಕಳೆದ ಸಂಚಿಕೆಯಿಂದ

## (Rain Water Harvesting)

–ಬಿ.ನಂ. ಚನ್ನಪ್ಪ *

**೬. ಛಾವಣಿ ನೀರಿನ ಶೇಖರಣೆ, ಸಂರಕ್ಷಣೆ ಮತ್ತು ಬಳಕೆ :**

ವಿವಿಧ ಕಟ್ಟಡಗಳ ಛಾವಣಿ ಮೇಲೆ ಬಿದ್ದ ನೀರನ್ನು ಶೇಖರಿಸಿ ಉಪಯೋಗಿಸುವ ವಿಧಾನವನ್ನು ಈಗ ಎಲ್ಲ ನಗರಗಳಲ್ಲಿ ಅನುಸರಿಸಲಾಗುತ್ತಿದೆ. ಕಾರಣ, ನೀರಿನ ಅಭಾವ, ನಗರದಲ್ಲಿ ಕಟ್ಟಡಗಳಲ್ಲದೆ ರಸ್ತೆಗಳು, ಕಾಂಕ್ರೀಟ್‌ನ ಫುಟ್‌ಪಾತ್‌ಗಳು, ಮನೆಯ ಸುತ್ತಲಿನ ಜಾಗವನ್ನು ಕಾಂಕ್ರೀಟಿನಿಂದ ಮುಚ್ಚುವುದು ಮೊದಲಾದ ಕ್ರಮಗಳಿಂದ ನೀರು ಭೂಮಿಗೆ ಇಳಿಯಲು ಅವಕಾಶವಿಲ್ಲದೆ ಹರಿದು ಹೋಗಿ ಕಡೆಯದಾಗಿ ಸಮುದ್ರವನ್ನು ಸೇರುತ್ತದೆ. ಛಾವಣಿಯ ನೀರನ್ನು ಶೇಖರಿಸಿ ಉಪಯೋಗಿಸುವ ಬಗ್ಗೆ ಇಂಜಿನಿಯರುಗಳು; ಪರಿಸರ ತಜ್ಞರು ಅನೇಕ ಮಾರ್ಗೋಪಾಯಗಳನ್ನು ಅಳವಡಿಸುತ್ತಿದ್ದಾರೆ.

ಮಳೆ ನೀರು ಛಾವಣಿಯ ಮೇಲೆ ಬಿದ್ದಾಗ ಅದು ಒಂದು ಕಡೆಗೆ ಹರಿದು ಬರುವಂತೆ ಛಾವಣಿಯನ್ನು ಇಳಿಜಾರಾಗಿ ನಿರ್ಮಿಸಬೇಕು. ನೀರನ್ನು ಸಂಗ್ರಹಿಸಲು ಎಚ್.ಡಿ.ಪಿ.ಇ. ಅಥವಾ ಪಿ.ವಿ.ಸಿ. ಪೈಪುಗಳನ್ನು ಉಪಯೋಗಿಸಬೇಕು. ಸುಮಾರು ೭೫ರಿಂದ ೧೦೦ ಚ.ಮೀ. ವಿಸ್ತಾರದ ಛಾವಣಿಯ ನೀರನ್ನು ಸಂಗ್ರಹಿಸಲು, ೧೦೦ ಮೀ.ಮೀ. ವ್ಯಾಸದ ಕೊಳವೆಗಳನ್ನು ಅಳವಡಿಸಿದರೆ ಸಾಕಾಗುತ್ತದೆ. ಇಂತಹ ನೀರನ್ನು ಸಂಗ್ರಹಿಸುವ ಮುನ್ನ ಶೋಧಿಸಬೇಕಾದುದು ಅವಶ್ಯಕ. ನೀರು ವಾಯುಮಾಲಿನ್ಯ ಮತ್ತು ಇತರ ಮಲಿನ ವಸ್ತುಗಳಿಂದ ಕಲುಷಿತವಾಗದಂತೆ ತಡೆಯಲು ಶೋಧಕಗಳ ಮುಖಾಂತರ ಶೋಧಿಸಿ ಉಪಯೋಗಿಸಬೇಕು. ಇಂತಹ ಶೋಧಕಗಳು ಕಾಂಕ್ರೀಟ್ ಅಥವಾ ಕಲ್ಲಿನ ತೊಟ್ಟಿಗಳು, ಹಂಡೆ ಮತ್ತು ಪಿ.ವಿ.ಸಿ. ಟ್ಯಾಂಕ್‌ಗಳಾಗಿರಬಹುದು. ಈ ಶೋಧಕಗಳಲ್ಲಿ ಮರಳು ಮತ್ತು ಜಲ್ಲಿಯನ್ನು ಉಪಯೋಗಿಸಬೇಕು. ಕುಡಿಯಲು ಉಪಯೋಗಿಸಬೇಕಾದರೆ, ಮರಳು ಜಲ್ಲಿಯ ಮಧ್ಯದಲ್ಲಿ ಇದ್ದಿಲನ್ನು ಉಪಯೋಗಿಸಬೇಕು.

ಮಳೆಯ ನೀರನ್ನು ಶೇಖರಿಸುವ ಮೊದಲು ಅನುಸರಿಸಬೇಕಾದ ನಿಯಮ ಅಥವಾ ವಿಧಾನಗಳು ಕೆಳಕಂಡಂತಿವೆ

ಅ) ಛಾವಣಿಯು ಶುಚಿಯಾಗಿರಬೇಕು. (ಧೂಳು, ಮಣ್ಣು, ಹಾಗೂ ಸಾಕು ಪ್ರಾಣಿಗಳ ಪ್ರವೇಶ ಇರಬಾರದು) ಆದ್ದರಿಂದ ಪ್ರಥಮವಾಗಿ ಬಿದ್ದ ಮಳೆ ನೀರನ್ನು ಸಂಗ್ರಹಿಸಬಾರದು.

ಆ) ಪಿ.ವಿ.ಸಿ. ಅಥವಾ ಎಚ್.ಡಿ.ಪಿ.ಇ. ಪೈಪುಗಳ ಮುಖಾಂತರ ನೀರನ್ನು ಸಂಗ್ರಹಿಸಬೇಕು.

ಇ) ಸಂಗ್ರಹಣೆಗೆ ಮುನ್ನ ಶೋಧಕಗಳ ಮುಖಾಂತರ ನೀರನ್ನು ಶೋಧಿಸಬೇಕು.

ಈ) ನೀರಿನ ತೊಟ್ಟಿ ಸಂಗ್ರಹಿಸುವುದರಿಂದ ಆರ್ಥಿಕವಾಗಿ, ಉಳಿತಾಯ ಮಾಡಬಹುದು. ಇಂತಹೆ ತೊಟ್ಟಿಗಳು ಭೂಮಿಯ ಮಟ್ಟದಿಂದ ಕೆಳಗಡೆ ಇರುವುದರಿಂದ ಗಾಳಿ, ಬೆಳಕಿನ ಸಂಪರ್ಕದಿಂದ ನೀರನ್ನು ಕೆಡದಂತೆ ರಕ್ಷಿಸಬಹುದು.

**ಮಳೆನೀರಿನ ಕುಯಿಲಿನ ಪ್ರಮಾಣ :**

ಬೆಂಗಳೂರಿನಲ್ಲಿ ಮಳೆಯ ಸರಾಸರಿ ೯೭೫ ಮಿ.ಮೀ. ಇದರಿಂದ ೧೦೦ ಚ.ಮೀ. ಛಾವಣಿಯ ವಿಸ್ತೀರ್ಣದಲ್ಲಿ ಸುಮಾರು ೮೦,೦೦೦ ಲೀಟರ್ ನೀರು ಲಭ್ಯವಾಗುತ್ತದೆ. ಕನಿಷ್ಟ ಮಳೆಯ ವರ್ಷದ ಆಧಾರದ ಮೇಲೆ ೪೦,೦೦೦ ಲೀಟರ್ ನೀರನ್ನು ಸಂಗ್ರಹಿಸಬಹುದು. (ಬೆಂಗಳೂರಿನ ಕನಿಷ್ಟ ಮಳೆಯ ಪ್ರಮಾಣ ವರ್ಷದಲ್ಲಿ ೬೮೩ ಮಿ.ಮಿ.–೧೦ ವರ್ಷದ ಸರಾಸರಿ) ಅಂದರೆ ಕನಿಷ್ಟ ಮಳೆ ಬಿದ್ದಾಗಲೂ ಸುಮಾರು ೪೦,೦೦೦ಲೀಟರ್ ನೀರನ್ನು ಸಂಗ್ರಹಿಸಬಹುದು.

**ಸಂಗ್ರಹಣೆ :**

ಮೇಲೆ ತಿಳಿಸಿದಂತೆ, ಛಾವಣಿಯ ನೀರನ್ನು ಕೊಳವೆಗಳಲ್ಲಿ ಶೋಧಕ ಮುಖಾಂತರ ಹರಿಸಿ ಪ್ರತಿಮನೆಯಲ್ಲಿರುವ

* ನಿವೃತ್ತ ಮುಖ್ಯ ಇಂಜಿನಿಯರ್, ನಂ. ೧೧೧೩, ೧೧ನೇ ಮುಖ್ಯರಸ್ತೆ, ಪಶ್ಚಿಮ ಕಾರ್ಡ್ ರಸ್ತೆ, ೨ನೇ ಹಂತ, ಬೆಂಗಳೂರು–೮೬.

ವ್ಯಕ್ತಿ ಯಾರೇ ಇರಲಿ, ಎಲ್ಲಿಯವನೇ ಇರಲಿ, ಅವನ ಬದುಕಿಗೆ ಅರ್ಥ ಬರುವುದು ಅವನು ಕೈಕೊಳ್ಳುವ ಸಾಧನೆಯಿಂದ – ಬಿ. ರಾಜಶೇಖರಪ್ಪ

ತೊಟ್ಟಿಗಳಲ್ಲಿ ಶೇಖರಿಸುವುದು ಒಳ್ಳೆಯದು. ೧೦೦ ಚ.ಮೀ. ಛಾವಣಿಯ ನೀರಿಗೆ ೬೦೦೦ ಲೀಟರ್‌ನ ತೊಟ್ಟಿಯು ಸಾಕಾಗುತ್ತದೆ. ಇದಲ್ಲದೆ ಶೋಧಕದಿಂದ ಬಂದ ನೀರನ್ನು ಬಾವಿಯಿದ್ದರೆ ಬಾವಿಗೆ ಬಿಡಬಹುದು ಅಥವಾ ಕೊಳವೆ ಬಾವಿಯಿದ್ದರೆ ಅದಕ್ಕೆ ಬಿಡಬಹುದು. ಇದರಿಂದ ಅಂತರ್ಜಲದ ವೃದ್ಧಿಯಾಗಿ, ಬಾವಿ ಮತ್ತು ಕೊಳವೆ ಬಾವಿಯಲ್ಲಿ ನೀರಿನ ಪ್ರಮಾಣ ಉತ್ತಮವಾಗಲು ಸಹಕಾರಿಯಾಗುತ್ತದೆ. (Recharging of ground water). ಮಳೆನೀರನ್ನು ನೆಲದಿಂದ ಎತ್ತರದಲ್ಲಿ ಶೋಧಕಗಳಿಂದ ಹರಿಸಿ ಟ್ಯಾಂಕ್‌ಗಳಲ್ಲಿ ಸಂಗ್ರಹಿಸಬಹುದು. ಹಾಗೆ ಮಾಡಿದಲ್ಲಿ ನೀರನ್ನು ಉಪಯೋಗಿಸುವುದು ಸುಲಭ. ನೀರು ಯಾವ ಯಂತ್ರದ ಸಹಾಯವಿಲ್ಲದೆ ಗುರುತ್ವಾಕರ್ಷಣೆಯಿಂದ ಹರಿದು ಉಪಯೋಗಿಸಲು ಅನುಕೂಲವಾಗುತ್ತದೆ. (Gravity flow) ಆದರೆ ಇದಕ್ಕೆ ನೀರಿನ ಟ್ಯಾಂಕ್ ಎತ್ತರದಲ್ಲಿ ಕಟ್ಟಲು ಹಣ ಖರ್ಚಾಗುತ್ತದೆ. ನೆಲಮಾಳಿಗೆಯ ಸಂಗ್ರಹ ಮಿತವ್ಯಯಕಾರಿ. ಆದರೆ ಇದರ ಉಪಯೋಗ ಮಾಡಲು ಯಂತ್ರದ ಸಹಾಯ ಬೇಕಾಗುತ್ತದೆ.

**ಮಳೆ ನೀರಿನ ಉಪಯೋಗ :**

ಹೀಗೆ ಸಂಗ್ರಹಿಸಿದ ನೀರನ್ನು ಕೈ ತೋಟಕ್ಕೆ, ವಾಹನ ಸ್ವಚ್ಛಗೊಳಿಸುವುದು, ಮನೆಯನ್ನು ಸಾರಿಸುವುದು/ತೊಳೆಯುವುದು, ಬಟ್ಟೆ ಒಗೆಯುವುದು ಮತ್ತು ಶೌಚಾಲಯಗಳಲ್ಲಿ ಉಪಯೋಗಿಸಬಹುದು. ಕುಡಿಯಲು ಅವಶ್ಯವಿದ್ದಾಗ ಪರೀಕ್ಷಿಸಿ ಉಪಯೋಗಿಸಬೇಕಾಗುತ್ತದೆ.

ನೀರನ್ನು ಹೆಚ್ಚುದಿನ ಸಂಗ್ರಹಿಸಿಡುವುದು ಕಷ್ಟ. ಬೇಸಿಗೆಯಲ್ಲಿ ಇದು ಸಾಧ್ಯವಾಗದಿರಬಹುದು. ಆದರೆ ಮಳೆಗಾಲದಲ್ಲಿ ಜಲಮಂಡಲಿಯ ನೀರಿಗೆ ಬದಲಾಗಿ ಉಪಯೋಗಿಸಬಹುದು. ಆದರೆ ಪ್ರತಿ ಮನೆಯಲ್ಲಿ ಭೂಮಿಗೆ ನೀರನ್ನು ಇಂಗಿಸಲು ಕ್ರಮ ತೆಗೆದುಕೊಂಡರೆ ಅಂತರ್ಜಲ ಮಟ್ಟ ಉತ್ತಮವಾಗುತ್ತದೆ. ಕೊಳವೆ ಬಾವಿಗಳಲ್ಲಿ ಸಾಕಷ್ಟು ನೀರು ಲಭ್ಯವಾಗುತ್ತದೆ. ನೀರು ಕೆಡಲು ಗಾಳಿ, ಸೂರ್ಯನ ಬೆಳಕು ಮತ್ತು ನೀರಿನಲ್ಲಿರುವ ಜೈವಿಕ ಪದಾರ್ಥಗಳು ಕಾರಣವಾಗುತ್ತವೆ. ಸಂಗ್ರಹಿಸಿದ ನೀರು ಕೆಡದಿರಲು ಸ್ಫಟಿಕ (Alum) ಮತ್ತು ಬ್ಲೀಚಿಂಗ್ ಪುಡಿ ಉಪಯೋಗಿಸಿ ಕೆಡದಂತೆ ಇಡಬಹುದು. ಒಂದು ದೊಡ್ಡ ಚಮಚ ಬ್ಲೀಚಿಂಗ್ ಪುಡಿಯನ್ನು ಎರಡು ಲೀಟರ್ ನೀರಿನಲ್ಲಿ ಮಿಶ್ರಣ ಮಾಡಿ, ೧೦೦೦ಲೀಟರ್ ನೀರಿಗೆ ಹಾಕಿದರೆ ನೀರು ಶುದ್ಧವಾಗುತ್ತದೆ ಆದರೂ ಈ ನೀರನ್ನು ಕಾಯಿಸಿ ಕುಡಿಯುವುದು ಒಳ್ಳೆಯದು. ಸೊಳ್ಳೆಗಳು ತೊಟ್ಟಿಯಲ್ಲಿ ಪ್ರವೇಶಿಸದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ 'ಗಪ್ಪಿ' ಅಥವಾ 'ಮೊಲಿ' ಮೀನುಗಳನ್ನು ಬಿಡಬಹುದು ಅಥವಾ ೫ ಮಿ.ಲೀ. ಬೇವಿನ ಎಣ್ಣೆಯನ್ನು ಹಾಕಿ ಸೊಳ್ಳೆ ನಿಯಂತ್ರಿಸಬಹುದು.

ಇಂತಹ ನೀರಿನ ಕುಯಿಲು ಮಾಡಲು ಒಂದು ಸಾವಿರದಿಂದ ೧೦,೦೦೦ ಅಥವ ೧೫,೦೦೦ ರೂಗಳು ಖರ್ಚಾಗಬಹುದು.

**ಸರ್ಕಾರದ ಪಾತ್ರ :**

ಸಾರ್ವಜನಿಕರು ತಮ್ಮ ತಮ್ಮ ನಿವೇಶನಕ್ಕೆ ಹೊಂದಿಕೆಯಾಗುವ ರೀತಿಯಲ್ಲಿ ಮಳೆಯ ನೀರನ್ನು ಸಂಗ್ರಹಣೆ ಮಾಡುವ ವಿಧಾನಗಳನ್ನು ಅಳವಡಿಸಬಹುದು. ಆದರೆ ಬಯಲು ಪ್ರದೇಶ ಅಂದರೆ ಉದ್ಯಾನವನಗಳು ಮತ್ತು ಸರ್ಕಾರದ ಕಟ್ಟಡಗಳು ಮತ್ತು ಸಾರ್ವಜನಿಕ ನಿವೇಶನಗಳಲ್ಲಿ ಮಳೆನೀರಿನ ಕೊಯಿಲು ಮಾಡುವುದು ಸರ್ಕಾರದ ಅಥವಾ ನಗರಪಾಲಿಕೆಗಳ ಮತ್ತು ನಗರಾಭಿವೃದ್ಧಿ ಮಂಡಳಿಗಳ ಕರ್ತವ್ಯವಾಗಿದೆ. ಜೊತೆಗೆ ಸರ್ಕಾರ/ಸಂಘ ಸಂಸ್ಥೆಗಳು ಸಾರ್ವಜನಿಕರಿಗೆ ಇದರ ಬಗ್ಗೆ ಅರಿವು ಮೂಡಿಸಲು ಕಾರ್ಯಕ್ರಮಗಳನ್ನು ರೂಪಿಸಬೇಕು.

ನಗರ ಪ್ರದೇಶಗಳಲ್ಲಿ ಕಟ್ಟಡಗಳನ್ನು ಕಟ್ಟಿಸುವ ನಕ್ಷೆಗಳನ್ನು ಮುಂಜೂರು ಮಾಡುವಾಗ ನಿಯಮಗಳನ್ನು ರೂಪಿಸಿ ಕಡ್ಡಾಯವಾಗಿ ನೀರನ್ನು ಕುಯಿಲು ಮಾಡಲು ಆದೇಶ ಮಾಡುವುದು ಅಗತ್ಯವಾಗಿದೆ. ಈಗಾಗಲೇ ಚೆನ್ನೈ, ಹೈದರಾಬಾದ್, ಇಂದೂರ್ ಮೊದಲಾದ ನಗರಗಳಲ್ಲಿ ಇಂತಹ ನಿಯಮಗಳು ಜಾರಿಯಲ್ಲಿವೆ. ಕರ್ನಾಟಕ ಸರ್ಕಾರ ಕೂಡ ಈ ದಿಸೆಯಲ್ಲಿ ನಿಯಮಗಳನ್ನು ರೂಪಿಸುತ್ತಿದೆ. ಒಟ್ಟಿನಲ್ಲಿ ನೀರಿನ ಮಹತ್ವವನ್ನು ಅರಿತು ಸಾರ್ವಜನಿಕರು, ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಒಟ್ಟಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ನೀರು ಪೋಲಾಗದಂತೆ ನೋಡಿಕೊಂಡು ಅದರ ಸಂಗ್ರಹಣೆ ಮಾಡಿಕೊಂಡು ನೀರಿನ ಭವಣೆಯನ್ನು ನೀಗಿಸಲು ಸತತ ಪ್ರಯತ್ನಶೀಲರಾಗಬೇಕಿದೆ. ☆

ಭಾರತೀಯರು ಎಂದೂ ದುರಾಕ್ರಮಣದ ಉದ್ದೇಶದಿಂದ ಹೊರನಾಡಿಗೆ ಹೋದ ನಿದರ್ಶನ ಇಲ್ಲ.
ಜಿ. ಹನುಮಂತರಾವ್





# ಸ್ಥಾವರಜಂಗಮ ಒಂದೆ ಎಂದುದು ಕೂಡಲಸಂಗನ ವಚನ

-ಕೋ.ರಂ. ಬಸವರಾಜು *

*'ಕನ್ನಡಿಯನೋಡುವ ಅಣ್ಣಗಳಿರಾ ಜಂಗಮವ ನೋಡಿರೆ;*
*ಜಂಗಮದೊಳಗೆ ಲಿಂಗಯ್ಯ ಸನ್ನಿಹಿತವಾಗಿಪ್ಪ*
*ಸ್ಥಾವರ ಜಂಗಮ ಒಂದೆ ಎಂದುದು ಕೂಡಲಸಂಗನ ವಚನ*
*(ಬ.ಷ.ವ. ೧೮೭)*

ಬಸವಣ್ಣನವರು ಭಕ್ತಸ್ಥಲದ ಹಲವಾರು ವಚನಗಳಲ್ಲಿ ಸ್ಥಾವರಜಂಗಮ ಒಂದೆ ಎಂಬುದಾಗಿ ನಿರವಿಸಿದ್ದಾರೆ. ಇಲ್ಲಿ ಸ್ಥಾವರವೆಂದರೆ ಗತಿನಿವೃತ್ತಿ ಹೊಂದಿದ ಜಡವಸ್ತುವಲ್ಲ. ಕಿಂತು ಸ್ಥಾವರವೆಂಧರೆ ಇಷ್ಟಲಿಂಗ. ಸ್ಥಾವರ ಜಂಗಮ ಈ ಎರಡೂ ಮಹಾಲಿಂಗಚೈತನ್ಯದ ಸ್ಥಿತಿ-ಗತಿಗಳು. ಸ್ಥಿತಿಯೇ ಇಷ್ಟಲಿಂಗ, ಗತಿಯೇ ಜಂಗಮ.

ವೀರಶೈವ ಸಾಧಕನು ತನ್ನ ಕರಸ್ಥಲದಲ್ಲಿ ಮೂರ್ತಗೊಂಡ(ಸ್ಥಾವರಗೊಂಡ) ಲಿಂಗದರ್ಪಣದಲ್ಲಿ ಜಂಗಮವನ್ನೂ, ಜಂಗಮಮುಖದರ್ಪಣದಲ್ಲಿ ಲಿಂಗವನ್ನೂ ಕಾಣುತ್ತಾನೆ. ಆದ್ದರಿಂದ ಸ್ಥಾವರಜಂಗಮ ಒಂದೇ ಎನಿಸುತ್ತದೆ. ಈ ಕಾರಣದಿಂದಲೇ ಲಿಂಗಮುಖದಿಂದ ಬಂದ ಆಪ್ಯಾಯನವೂ ಒಂದೆ, ಜಂಗಮಮುಖದಿಂದ ಬಂದ ತೃಪ್ತಿಯೂ ಒಂದೆ ಎನ್ನುತ್ತಾರೆ ಬಸವಣ್ಣನವರು.

*'ಸ್ಥಾವರಜಂಗಮವೆಂಬ ಉಭಯಪಕ್ಷ ಒಂದೆ*
*ಆವ ಮುಖದಿಂದ ಬಂದಡೂ ತೃಪ್ತಿಯೊಂದೆ*
*ಕೂಡಲಸಂಗಮದೇವಾ ಆಪ್ಯಾಯನವೊಂದೆ'*

(ಬ.ಷ.ವ.-೮೦೫)

ಇದರ ಜೊತೆಗೆ 'ಜಂಗಮಕ್ಕೆರೆದಡೆ ಸ್ಥಾವರ ನೆನೆಯಿತ್ತು' (ವ.ಸಂ. ೧೯೬) ಎಂದಿದ್ದಾರೆ. ಮತ್ತೊಂದು ವಚನದಲ್ಲಿ-

*'ದ್ವೈತಾದ್ವೈತವನೋದಿ ಏನ ಮಾಡುವಿರಯ್ಯಾ*
*ನಮ್ಮ ಶರಣರಿಗೆ ಉರಿಗೆ ಅರಗಾಗಿ ಕರಗದನ್ನಕ್ಕ*
*ಸ್ಥಾವರಜಂಗಮ ಒಂದೆ ಎಂದು ನಂಬದನ್ನಕ್ಕ*
*ಕೂಡಲಸಂಗಮದೇವಾ*
*ಬರಿಯ ಮಾತಿನ ಮಾಲೆಯೇನಹುದು*
*(ಬ.ಷ.ವ. ೧೯೦)*

ಬಸವಣ್ಣನವರು ದ್ವೈತಾದ್ವೈತದ ಹಿನ್ನಲೆಯಲ್ಲಿ ಸ್ಥಾವರ ಜಂಗಮ ಒಂದೇ ಎಂಬುದನ್ನು ಈ ವಚನದಲ್ಲಿ ನಿರೂಪಿಸಿದ್ದಾರೆ. ದ್ವೈತಾದ್ವೈತವೆಂಬುದು ವೀರಶೈವ ದರ್ಶನದ ಪರ್ಯಾಯ ನಾಮಗಳಲ್ಲಿ ಒಂದಾಗಿದೆ. ಶಿವಾದ್ವೈತ, ದ್ವೈತಾದ್ವೈತ, ಶಕ್ತಿವಿಶಿಷ್ಟಾದ್ವೈತ ಇವು ವೀರಶೈವದರ್ಶನದ ಪರ್ಯಾಯ ಹೆಸರುಗಳು. ಈ ದ್ವೈತಾದ್ವೈತದರ್ಶನದ ಪ್ರಕಾರ ಸ್ಥಾವರಜಂಗಮ ಒಂದೆ. ಇವೆರಡೂ ಒಂದೇ ಆದ ಕಾರಣ ಇಷ್ಟಲಿಂಗಪೂಜೆಯಲ್ಲಿ ಹೇಗೋ ಹಾಗೆ ಜಂಗಮನ ಪೂಜೆ ಮತ್ತು ಸೇವೆಯಲ್ಲಿ ಸಾಧಕನ ಅಂತಃಕರಣವು ಉರಿಗೆ ತಾಗಿದ ಅರಗಿನಂತೆ ಕರಗಬೇಕು.

ಈ ದ್ವೈತಾದ್ವೈತ ದರ್ಶನಕ್ಕೆ ಶಿವಾಗಮಗಳೇ ಮೂಲ ದ್ರವ್ಯ. ಶಿವಾಗಮಗಳಲ್ಲಿ ಒಂದಾದ ಚಂದ್ರಜ್ಞಾನಾಗಮದ ೪ನೆಯ ಪಟಲದಲ್ಲಿ-'ಸ್ಥಾವರಜಂಗಮಂ ಚೇತಿ ಶಂಭೋಃ ರೂಪದ್ವಯಂ ಸ್ಮೃತಂ' ಸ್ಥಾವರ ಜಂಗಮಗಳೆರಡೂ ಲಿಂಗರೂಪಿಣಿಯಾದ ಪರಶಿವನ ಎರಡು ರೂಪಗಳು ಎಂದು ಹೇಳಿದೆ.

ಆ ಆಗಮದಲ್ಲಿ ಮುಂದುವರಿದು-ಸ್ಥಾವರದಲ್ಲಿ ಪುನಃ ಸ್ವಯಂಭುಲಿಂಗ-ಪ್ರತಿಷ್ಠಿತಲಿಂಗವೆಂಬುದಾಗಿ ದ್ವಿವಿಧವೂ ಜಂಗಮದಲ್ಲಿ ಮಂತ್ರಜಂಗಮ-ಸಹಜಜಂಗಮವೆಂಬುದಾಗಿ ಎರಡು ವಿಧವೆಂದೂ ಹೇಳಿದೆ. ಇದನ್ನು ಪರಿಭಾವಿಸಿದಾಗ ಮಂತ್ರಜಂಗಮವನ್ನೇ ಸ್ಥಾವರವೆಂಬುದಾಗಿ ಕರೆದಿರಬಹುದೆಂದು ತರ್ಕಿಸಬಹುದಾಗಿದೆ.

ಬಸವಣ್ಣನವರು ಮುಂದಿನ ವಚನಗಳಲ್ಲಿ ಸ್ಥಾವರ

* 'ಮಧುಕೇಶ್ವರ ನಿಲಯ', 5ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.

'ಕೇವಲ ಪದಗಳ ಬೆನ್ನು ಹತ್ತಿದವರಿಗೆ ವಚನಗಳ ಆತ್ಮ ಖಂಡಿತಾ ಸಿಗುವುದಿಲ್ಲ' - ನರಹಳ್ಳಿ ಬಾಲಸುಬ್ರಹ್ಮಣ್ಯ

ಜಂಗಮ ಒಂದೆಂದರಿಯುವುದರ ಫಲಶ್ರುತಿಯನ್ನು ಹೇಳಿದ್ದಾರೆ. **'ಸ್ಥಾವರಜಂಗಮ ಒಂದೆಂದರಿದಡೆ ಕೂಡಲ ಸಂಗಮದೇವ ಸನ್ನಿಹಿತ'** (ಬ.ಷ.ವ. ೪೨೧)

ಒಂದೆಂದು ತಿಳಿದು **'ಏಕೋಭಾವನೆಯಿಂದ ಆರಾಧಿಸಿದರೆ ಅಮೃತದ ಬೆಳಸು. ವಿರೋಧಿಸಿದರೆ ವಿಷದ ಬೆಳಸು'** (ಬ.ಷ.ವ. ೫೨೧)

**'ಸ್ಥಾವರಜಂಗಮವು ಒಂದೆ ಎಂದು(ತಿಳಿದು) ಇದಿರ ನುಡಿದರೆ(ಜಂಗಮಕ್ಕೆ).... ಈ ನುಡಿ ಸುಡದೆ ತಪ್ಪದು'** (ಬ.ಷ.ವ. ೩೮೧)

ಇನ್ನು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ವಾಕ್ಯದಲ್ಲಿ ಒಂದೇ ಎಂದು ಭಾವಿಸಿದರೆ ಸ್ಥಾವರಜಂಗಮಕ್ಕೆ ವೈಧರ್ಮ್ಯವುಂಟಾಗುವುದಿಲ್ಲವೇ? ಎಂದು ಪೂರ್ವಪಕ್ಷ ಮಾಡಬಹುದು. ಆದರೆ ಪ್ರಕರಣವೆಂಬ ಅರ್ಥ ನಿಯಾಮಕವನ್ನನುಸರಿಸಿ 'ಇಲ್ಲಿ ಸ್ಥಾವರಶಬ್ದಕ್ಕೆ ಅರ್ಥವನ್ನು ನಿರ್ಣಯಿಸಬೇಕು.

*ಉಳ್ಳವರು ಶಿವಾಲಯವ ಮಾಡುವರು*
*ನಾನೇನು ಮಾಡಲಿ ಬಡವನಯ್ಯಾ*
*ಎನ್ನ ಕಾಲೇ ಕಂಭ ದೇಹವೇ ದೇಗುಲ*
*ಶಿರವೇ ಹೊನ್ನಕಳಶವಯ್ಯಾ*
*ಕೂಡಲಸಂಗಮದೇವಯ್ಯಾ*
*ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ'*

(ಬ.ಷ.ವ. ೮೨೦)

ಇಲ್ಲಿ ದೇಹ ಸ್ಥಾವರ, ಆತ್ಮ ಜಂಗಮ, ದೇಹ ಸ್ಥೂಲ, ಆತ್ಮ ಸೂಕ್ಷ್ಮ. ಸ್ಥಾವರವೆಂದರೆ ಸಾಕಾರ, ಸೂಕ್ಷ್ಮವೆಂದರೆ ನಿರಾಕಾರ. ಸೂಕ್ಷ್ಮವೆಂದರೆ 'ಯೋಗಿಭಿಃಜ್ಞಾನದೃಷ್ಟ್ಯಾಯ ಧ್ಯೇಯಂ ತತ್‌ಸೂಕ್ಷ್ಮಮುಚ್ಯತೇ' ಎಂಬ ಸೂಕ್ಷ್ಮಾಗಮದ ಉಕ್ತಿಯಂತೆ ಶಿವಯೋಗಿಗಳು ತಮ್ಮ ಹೃತ್ಪದ್ಮದ ದಹರಾಕಾಶದಲ್ಲಿ ಧ್ಯಾನಿಸುವ ಪರವಸ್ತು. ಅರ್ಥಾತ್ ಪ್ರಾಣಲಿಂಗ.

ಪಂಚೀಕೃತಪಂಚಭೂತಗಳಿಂದಾದ ದೇಹಕ್ಕೆ ಅಳಿವುಂಟು. ಆತ್ಮಕ್ಕೆ ಅಳಿವಿಲ್ಲ. ದೇಹ ಅಳಿಯಿತೆಂದರೆ ಪಂಚಭೂತಗಳಲ್ಲಿ ಲೀನವಾಯಿತೆಂದರ್ಥ. ಈ ಲೀನವಾಗು ವಿಕೆಯೇ ಅಳಿವು. ಅಳಿವೆಂದರೆ ಆತ್ಯಂತಿಕನಾಶವಲ್ಲ, ರೂಪಾಂತರಪ್ರಾಪ್ತಿ. ಅಳಿವನ್ನು ಆತ್ಯಂತಿಕನಾಶವೆಂದು ಒಪ್ಪಿದರೆ–ಶರಣಧರ್ಮದ ಪ್ರಕಾರ–'ಶಿವನ ಅವಿಕೃತ ಪರಿಣಾಮರೂಪವೇ ಈ ಜಗತ್ತು ಅರ್ಥಾತ್ ಶಿವನೇ ಜಗದಾಕಾರವಾಗಿ ಪರಿಣಮಿಸಿದ್ದಾನೆ, ಆದ್ದರಿಂದ ಶಿವನೂ ಸತ್ಯ ಜಗತ್ತೂ ಸತ್ಯ' ಎಂಬ ಸಿದ್ಧಾಂತಕ್ಕೆ ಚ್ಯುತಿ ಬರುತ್ತದೆ. ಆಗ ಶರಣರೂ ಕೂಡ ಅದ್ವೈತವಾದಿಗಳಂತೆ ಜಗತ್ತನ್ನು ಅನಿತ್ಯ ಮಿಥ್ಯಾ ಎನ್ನಬೇಕಾಗುತ್ತದೆ. ಆದ್ದರಿಂದ ಸ್ಥಾವರಕ್ಕಳಿವುಂಟು ಎಂದು ಹೇಳುವಲ್ಲಿ ಸ್ಥಾವರ–ಸ್ಥೂಲವು ಸೂಕ್ಷ್ಮವನ್ನೈದುವುದು ಎಂದೇ ಹೇಳಬೇಕಾಗುತ್ತದೆ.

ಷ್ಠಾಗತಿನಿವೃತ್ತೌ ಎಂಬಂತೆ ಸ್ಥಾವರವೆಂದರೆ ಸ್ಥಿರವಾಗಿರತಕ್ಕದ್ದು. ಸ್ಥಾಣು ಶಬ್ದವೂ ಇದೇ ಧಾತು ನಿಷ್ಪನ್ನವಾದ ಸ್ಥಾವರ ಪದದ ಪರ್ಯಾಯಪದವೆನ್ನಬಹುದು. ಆದ್ದರಿಂದ 'ಸ್ಥಾಣೂರುದ್ರಉಮಾಪತಿಃ' ಕೋಶಾನ್ವಯ ಸ್ಥಾಣು ಅಥವಾ ಸ್ಥಾವರವೆಂದರೆ ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣನಾದ ತ್ರಿಅವಸ್ಥಾದಿಗಳನ್ನತಿಗಳೆದ ಪರಶಿವನೆ ಸ್ಥಾವರವೆನ್ನಬಹುದು.

ಸ್ಥಾವರವೆಂದರೆ ಸ್ಥೂಲ, ಜಂಗಮವೆಂದರೆ ಸೂಕ್ಷ್ಮ ಎಂಬುದಕ್ಕೆ

**'ಪೃಥಿವಿಯೇ ಸ್ಥಾವರ, ಜಲವೇ ಜಂಗಮ**
**ಅಗ್ನಿಯೇ ಸ್ಥಾವರ, ವಾಯುವೇ ಜಂಗಮ**
**ಆಕಾಶವೇ ಸ್ಥಾವರ, ಜೀವನೇ ಜಂಗಮ**
**ಪೃಥಿವಿಯೇ ಸ್ಥೂಲ ಜಲವೇ ಸೂಕ್ಷ್ಮ**
**ಅಗ್ನಿಯೇ ಸ್ಥೂಲ ವಾಯುವೇ ಸೂಕ್ಷ್ಮ**
**ಆಕಾಶವೇ ಸ್ಥೂಲ ಆತ್ಮನೇ ಸೂಕ್ಷ್ಮ**
**ಸ್ಥೂಲವಸ್ತುಗಳಿಗೆ ಸೂಕ್ಷ್ಮವಸ್ತುಗಳೇ ಪ್ರಾಣವಾಗಿಹವು**
**ತತ್ಸಂಗಂಗಳಿಂ ಬಿಂದುಕಳಾನಾದಾದಿಗಳು**
**ಸೃಷ್ಟಿಯಾಗಿಹವು**
**ಸ್ಥೂಲವಸ್ತುಗಳು ಸೂಕ್ಷ್ಮವಸ್ತುಗಳಲ್ಲೇ ಸೃಷ್ಟಿಸ್ಥಿತಿ**
**ಸಂಹಾರಾದಿಗಳಂ ಹೊಂದುತ್ತಿಹವು'** – ಎಂಬ ಮುಮ್ಮಡಿ ಕಾರ್ಯೇಂದ್ರನ ವೇದಸಂಜೀವಿನಿಯ ವಚನವನ್ನೂ ಗಮನಿಸಬಹುದು. ☆

'ಭಜನೆಗೆ ದೊಡ್ಡ ಶಕ್ತಿಯಿದೆ. ಇದನ್ನು ನಾನು ಅನುಭವದಿಂದ ಕಂಡುಕೊಂಡಿದ್ದೇನೆ'
– ಅಣ್ಣಾ ಹಜಾರೆ







# ತೀವ್ರರೋಗಗಳಲ್ಲಿ ನಿಸರ್ಗೋಪಚಾರ

## ಹೊಟ್ಟೆನೋವು

–ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

ಅಪೆಂಡಿಸೈಟಿಸ್ (Appendicitis)

'ಏನು, ಅಪೆಂಡಿಸೈಟಿಸ್‌ಅನ್ನು ಮನೆಯಲ್ಲಿಯೇ ಉಪಚರಿಸುವುದೇ?'

ಅಪೆಂಡಿಸೈಟಿಸ್ ಎಂದ ಕೂಡಲೇ ಆಪರೇಷನ್ ಆಗಲೇಬೇಕೆಂಬುದೇ ಬಹಳ ಜನರ ಮತ. ಇಷ್ಟೊಂದು ಭಯ ಬೀಳಿಸುವ ಅಪೆಂಡಿಕ್ಸ್ ಬಹಳ ದೊಡ್ಡ ಅಂಗವೆಂದುಕೊಂಡರೆ ಅದು ತಪ್ಪು. ಅದರ ಪೂರ್ಣ ಹೆಸರು, ಹುಳುಗರುಳು (Vermiform Appendix) ಅಂದರೆ ಹುಳುವಿನ ಆಕಾರದ 7ರಿಂದ 10 ಸೆಂಟಿಮೀಟರ್ ಉದ್ದದ $1^1/_2$ ಸೆಂಟಿಮೀಟರ್ ಸುತ್ತಳತೆಯ ಒಂದು ಸಣ್ಣ ಅಂಗ. ಇಷ್ಟು ಚಿಕ್ಕ ಅಂಗ ಎಷ್ಟೊಂದು ಭಯ ಬೀಳಿಸುತ್ತದೆ! ಈ ಅಂಗದ ಕೆಲಸವೇನು?

'The Appendix is a worm like Vestigial structure of no use which is frequently obstructed and infected'- 'ಅಪೆಂಡಿಕ್ಸ್ ಎನ್ನುವುದು ಹುಳುವನ್ನು ಹೋಲುವ ಒಂದು ಪಳೆಯುಳಿಕೆ. ಕೆಲಸಕ್ಕೆ ಬಾರದ ಆಹಾರ ಕಟ್ಟಿಕೊಂಡು ಉರಿಯೂತಕ್ಕೆ ಒಳಗಾಗುವ ಅಂಗ'.–The Science book of Human body, Edith Esproul M.D.

ಇದು ವೈದ್ಯವಿಜ್ಞಾನದ ಅಭಿಪ್ರಾಯವಾಗಿತ್ತು.

**ಲಕ್ಷಣಗಳು :** ಹೊಟ್ಟೆಯ ಮಧ್ಯಭಾಗದಲ್ಲಿ ಇದ್ದಕ್ಕಿದ್ದಂತೆ ನೋವು ಪ್ರಾರಂಭವಾಗಿ ಬಲಭಾಗಕ್ಕೆ ಚಲಿಸುತ್ತದೆ. ಹಸಿವು ಇಲ್ಲದಿರುವುದು, ಓಕರಿಕೆ, ವಾಂತಿ, ಸ್ವಲ್ಪಮಟ್ಟಿನ ಜ್ವರ, ಮಲಬದ್ಧತೆಯಿರುತ್ತದೆ. ಹೊಟ್ಟೆಯ ಬಲಭಾಗದ ಮಾಂಸಖಂಡ ತುಂಬಾ ಬಿಗಿಯಾಗಿರುತ್ತದೆ. ಹೊಟ್ಟೆಯ ಎಡಭಾಗವನ್ನು ಒತ್ತಿದರೆ ಬಲಗಡೆಯ ನೋವು ಹೆಚ್ಚುತ್ತದೆ. ಕೆಮ್ಮು, ಸೀನುಗಳಿಂದಲೂ ನೋವು ಹೆಚ್ಚಾಗುತ್ತದೆ. ಬಲಗಾಲನ್ನು ಮೇಲಕ್ಕೆ ಎತ್ತಿದರೆ ನೋವು ಕೊಂಚ ಕಡಿಮೆಯಾದಂತೆ ಕಾಣುತ್ತದೆ.

**ಕಾರಣ :** ದಂಡಾಣುಜೀವಿ (Bacilli) ಅಥವಾ ನಾವು ತಿನ್ನುವ ಹಣ್ಣಿನಲ್ಲಿನ ಬೀಜಗಳು, ಕಲ್ಲುಹರಳು ಇತ್ಯಾದಿಗಳು ಈ ಸಣ್ಣ ಚೀಲದಲ್ಲಿ ತುಂಬಿಕೊಂಡು ಊತವೇರ್ಪಡುವುದು. ಅದಕ್ಕೆ ಸೋಂಕು ತಗಲು ಉರಿಊತವಾಗುವುದು. ಇದು ಒಂದು ನಂಬಿಕೆ.

**ಅಪೆಂಡಿಕ್ಸ್ ಅಪ್ರಯೋಜಕ ಅಂಗವೇ?**

ಸಣ್ಣ ಕರುಳಿನಲ್ಲಿ ಹೀರಲ್ಪಟ್ಟು ಉಳಿದ ದ್ರವರೂಪದ ಅಂಶವು ಇಲಿಯೋ ಸೀಕಲ್ ವಾಲ್ವ್‌ನ ಮುಖಾಂತರ ದೊಡ್ಡ ಕರುಳಿಗೆ ಬರುತ್ತದೆ. ಸಣ್ಣಕರುಳು ದೊಡ್ಡಕರುಳನ್ನು ಸೇರುವ ಜಾಗಕ್ಕೆ ಮೂಗರುಳು (Caccum) ಎಂದು ಹೆಸರು. ಅದರಿಂದ ಆಹಾರವು ಏರುಗರುಳಿಗೆ (Ascending colon) ಏರುತ್ತದೆ. ಮೂಗರುಳು ಮತ್ತು ಹುಳುಗರುಳು ತನ್ನ ಗುಣದಲ್ಲಿ ದೊಡ್ಡಕರುಳಿಗಿಂತ ಸಣ್ಣ ಕರುಳನ್ನು ಹೋಲುವುದೇ ಹೆಚ್ಚು. ಇಲ್ಲಿಯೂ ಸಹ ಆಹಾರಾಂಶದ ಹೀರುವಿಕೆಯು ಕೊಂಚವಾದರೂ ಮುನ್ನಡೆದೇ ಇರುತ್ತದೆ. ಸಣ್ಣಕರುಳಿನಿಂದ ಮೂಗರುಳಿಗೆ ಬರುವ ಉಳಿದ ಭಾಗದ ವೇಗವನ್ನೂ ಸಹ ಅಪೆಂಡಿಕ್ಸ್ ನಿಯಂತ್ರಿಸುತ್ತದೆ. ಅತಿವೇಗದಿಂದಾಗಲಿ, ಅತಿಹೆಚ್ಚಾಗಿಯಾಗಲಿ ನೂಕಲ್ಪಟ್ಟರೆ ದೊಡ್ಡಕರುಳಿಗೆ ಹೊರೆಯಾಗಿ ಭೇದಿಯ ರೂಪದಲ್ಲಿ ಹೊರದೂಡಲ್ಪಡುತ್ತದೆ. ಉಳಿದ ಆಹಾರಾಂಶವು ಏರುಗರುಳಿನಲ್ಲಿ ಏರುವಾಗ ಅದು ಗುರುತ್ವಾಕರ್ಷಣಕ್ಕೆ ಒಳಗಾಗಿ ಕೆಳಕ್ಕೆ ಎಳೆಯಲ್ಪಡುತ್ತದೆ. ಕುಳಿತು ಕೆಲಸ ಮಾಡುವವರಲ್ಲಿ ಆಹಾರದಲ್ಲಿ ಜೀರ್ಣವಾಗದೇ ಉಳಿದ ವಸ್ತುವು ಮೂಗರುಳು ಮತ್ತು ಹುಳುಗರುಳುಗಳಲ್ಲಿ ಹೆಚ್ಚು ಹೊತ್ತು ಉಳಿಯುತ್ತದೆ. ಹುಳುಗರುಳಿನ ಮೇಲ್ಪದರವು ಸ್ನಾಯುವಿನ ಊತಕ (Muscular Tissue) ಅದೇ ಒಳಪದರವು ಹಾಲ್ರಸದ ಊತಕ (Lymphoid Tissue) ಕೆರಳುವಿಕೆಯ ಗುಣವುಳ್ಳ ವಿಷ ಪದಾರ್ಥಗಳನ್ನು ಈ ಹಾಲ್ರಸದ ಊತಕವು ಪರಿಣಾಮಹೀನಗೊಳಿಸುತ್ತದೆ. ಈ ವಿಷಯವು ಡಾ॥ ಮ್ಯಾಕ್‌ವಿನ್‌ರವರಿಗೆ ಅನೇಕ ಶಸ್ತ್ರಕ್ರಿಯೆಗಳನ್ನು ಮಾಡಿದ ನಂತರ ಗಮನಕ್ಕೆ ಬಂದ ಅಂಶ. ಈಗ

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

'ಮಂತ್ರ–ತಂತ್ರ ಸಮುಚ್ಚಯವನ್ನು 'ಆಗಮ'ವೆಂದು ಕರೆಯುವರು – ಕೃಷ್ಣದೀಕ್ಷಿತ

ಯೋಚಿಸಿ ಅಪೆಂಡಿಕ್ಸ್ ಅಪ್ರಯೋಜಕ ಅಂಗವೇ?

ಇಂಗ್ಲೆಂಡಿನ ಸರ್ಜನ್‌ರಾದ ಡಾ॥ ಮ್ಯಾಕ್‌ವಿನ್ (Dr. Maccwen) ರವರು ಅವರ ಸಮಕಾಲೀನರಾದ ಇತರೆ ಎಲ್ಲಾ ಸರ್ಜನರುಗಳಿಗಿಂತ ಹೆಚ್ಚು ಅಪೆಂಡಿಕ್ಸ್‌ಗಳನ್ನು ಶಸ್ತ್ರ ಚಿಕಿತ್ಸೆಯಿಂದ ತೆಗೆದು ಹಾಕಿದ್ದರು. ಅವರು ತಮ್ಮ ಅನುಭವ ದಿಂದ ತೆಗೆದುಕೊಂಡ ಕಡೆಯ ನಿರ್ಣಯ,

" Therefore the secretion of the Appendix viewed alone in this sense would be valuable aid to digestion and the excision of that organ, except in a hopelessly diseased condition is manifestly improper'- 'ಆದ್ದರಿಂದ ಈ ದೃಷ್ಟಿಯಿಂದ ನೋಡಿದರೆ ಅಪೆಂಡಿಕ್ಸ್ ಸುರಿಸುವ ದ್ರವವು ಜೀರ್ಣಕ್ರಿಯೆಗೆ ಬಹಳ ಅಮೂಲ್ಯವಾದ ಸಹಕಾರಿ. ಬಹಳ ಹಾಳಾದ ಸನ್ನಿವೇಶವನ್ನು ಬಿಟ್ಟು ಬೇರೆಯ ವೇಳೆಯಲ್ಲಿ ಅದನ್ನು ಶಸ್ತ್ರಚಿಕಿತ್ಸೆಯಿಂದ ತೆಗೆಯಬಾರದು' -Natural Therapeutics, Dr. Henry Lindlahr

ಈಗ ಅನೇಕ ಜನ ವೈದ್ಯರುಗಳೂ ಸಹ ಈ ಅಭಿಮತ ವನ್ನು ಒಪ್ಪುತ್ತಾರೆ.

**ಅಪೆಂಡಿಕ್ಸ್ ಅಪಾಯಕಾರಿಯಾಗುವುದೇಕೆ ?**

ಶರೀರದಲ್ಲಿ ತಯಾರಾದ ವಿಷ (Endogenous) ಮತ್ತು ಹೊರಗಿನಿಂದ ಆಹಾರ, ನೀರು, ಗಾಳಿ, ಔಷಧಿ ಇತ್ಯಾದಿಗಳಿಂದ ಒಳಕ್ಕೆ ಸೇರಿದ ವಿಷ ಇವೆರಡನ್ನೂ ಸಹ ಈ ಅಂಗ ನಿಷ್ಕ್ರಿಯಗೊಳಿಸಬೇಕು. ನಾವು ಹೆಚ್ಚು ಹೆಚ್ಚು ತುಂಬುವುದೇ ಜಾಸ್ತಿಯಾದಾಗ ಆ ಅಂಗಕ್ಕೆ ಹೊರ ಹೆಚ್ಚಾಗಿ ಬಹಳ ಬೇಗ ಉರಿಯೂತಕ್ಕೆ ಒಳಗಾಗುತ್ತದೆ.

**ಅಪೆಂಡಿಕ್ಸ್ ಒಂದು ಪಳಯುಳಿಕೆಯೇ ?**

ಮಾಂಸಾಹಾರಿ ಪ್ರಾಣಿಗಳಲ್ಲಿ ಇದು ತುಂಬಾ ಸಣ್ಣದು. ಸಸ್ಯಾಹಾರಿ ಪ್ರಾಣಿಗಳಲ್ಲಿ ಇದು ಇನ್ನೂ ಕೊಂಚ ಬೆಳೆದಿದೆ. ಹಣ್ಣಾಹಾರಿಯಾದ ಕೋತಿಯಲ್ಲಿ ಇದು ಇನ್ನೂ ದೊಡ್ಡ ದಿದೆ. ಮನುಷ್ಯನಲ್ಲಿ ಇದು ಎದ್ದು ಕಾಣುವಷ್ಟಿದೆ. ಹಾಗಾದರೆ ಇದು ಪಳೆಯುಳಿಕೆಯೇ? ಟಾನ್ಸಲ್ಸ್ ಮನೆಯ ಮುಂಬಾಗಿಲು, ಅಪೆಂಡಿಕ್ಸ್ ಮನೆಯ ಹಿಂಬಾಗಿಲು. ಒಮ್ಮೊಮ್ಮೆ ನೆಗಡಿ ಯಾಗುತ್ತಿದ್ದುದು ಟಾನ್ಸಲ್ಸ್ ತೆಗೆಯುವುದರಿಂದ ನಿತ್ಯ ನೆಗಡಿ ಯಾಗಿ ಪರಿವರ್ತನೆ ಹೊಂದುತ್ತದೆ. ಹಾಗೆಯೇ ಒಮ್ಮೊಮ್ಮೆ ಭೇದಿಯಾಗುತ್ತಿದ್ದುದು ಅಪೆಂಡಿಕ್ಸ್ ತೆಗೆಯುವುದರಿಂದ ನಿತ್ಯ ಭೇದಿಯಾಗಲು ಪ್ರಾರಂಭವಾಗುತ್ತದೆ. ಅವುಗಳನ್ನು ತೆಗೆದು ಹಾಕುವ ಮುನ್ನ ಎರಡು ಸಲ ಯೋಚಿಸಬೇಕಾದ ವಿಚಾರವಲ್ಲವೇ?

ನಿಸರ್ಗೋಪಚಾರದ ಚಿಂತನೆಯಂತೆ ಅಪೆಂಡಿಕ್ಸ್‌ನ ಉರಿಊತಕ್ಕೆ ಮುಖ್ಯ ಕಾರಣ ಮಲಬದ್ಧತೆ. ಪರಕೀಯ ವಸ್ತುಗಳಾದ ಕಲ್ಲು, ಹಣ್ಣಿನಬೀಜ, ಕ್ರಿಮಿ ಇತ್ಯಾದಿಗಳು ಎರಡನೆಯ ಕಾರಣ. ಇದನ್ನೇ ಸಮರ್ಥಿಸುತ್ತದೆ ಡಾ॥ ಅಸ್ಲರ್‌ರವರ ಹೇಳಿಕೆ.

'Only two instances of foreign bodies in the appendix came under my observation in ten years'- 'ನನ್ನ ಅನುಭವದ ಹತ್ತು ವರ್ಷಗಳಲ್ಲಿ ಎರಡು ಸಲ ಮಾತ್ರ ಅಪೆಂಡಿಕ್ಸ್‌ನಲ್ಲಿ ಪರಕೀಯ ವಸ್ತುವಿತ್ತು'- Dr. William Osler.

**ನಿಸರ್ಗೋಪಚಾರ** : 1) ಬೆಡ್‌ರೆಸ್ಟ್ ಮೊದಲ ಕರ್ತವ್ಯ. 2.ಉಪವಾಸ : ಬಿಸಿನೀರು ಕುಡಿದುಕೊಂಡು ಉಪವಾಸ ಮಾಡಬೇಕು. ಉಪವಾಸವೇ ಈ ಕಾಯಿಲೆಗೆ ಬಹಳ ಮುಖ್ಯ ಔಷಧಿ. ನೀರನ್ನು ಬಿಟ್ಟು ಮತ್ತೇನನ್ನೂ ಕೊಡಲೇ ಬಾರದು. ಅದಕ್ಕೆ ಕೊಂಚ ನಿಂಬೆಯ ಹುಳಿ ಹಿಂಡಿರಬಹುದು 3. ಅಹಿಂಸಾತ್ಮಕ ಎನಿಮಾ ದಿನಕ್ಕೊಮ್ಮೆ ಕೊಡಬೇಕು. 4.ಹಾಟ್‌ಬ್ಯಾಗ್‌ನಲ್ಲಿ ದಿನಕ್ಕೆ ಎರಡು-ಮೂರು ಸಲ ಬಿಸಿ ನೀರಿನ ಕಾವುಟ. 5. ನಂತರ ಮಣ್ಣುಪಟ್ಟಿ, ಇವೆರಡನ್ನೂ ಆಗಾ ಮಾಡುತ್ತಿರಬೇಕು. ಊತ ಮತ್ತು ನೋವು ಕಡಿಮೆ ಯಾಗುವವರೆವಿಗೂ ಇವಿಷ್ಟೇ ಉಪಚಾರ. 6. ನಂತರ ಹಣ್ಣಿನ ರಸಗಳೊಂದಿಗೆ ಕಡಿಮೆ ಸಲ ಮೇಲಿನ ಉಪಚಾರ ಗಳನ್ನು ಮುಂದುವರಿಸಬೇಕು. 7. ಮೂರು-ನಾಲ್ಕು ದಿನಗಳ ನಂತರ ಹಣ್ಣಿನ ಊಟ. 8. ಸುಮಾರು ಒಂದು ವಾರವು ಕಳೆದ ನಂತರ ಬೇಯಿಸಿದ ತರಕಾರಿಗಳು, ಹಸಿಯ ತರಕಾರಿಯ ರಸ, ಹಣ್ಣುಗಳು ಇತ್ಯಾದಿ. 9. ಜ್ವರವಿದ್ದಲ್ಲಿ, ಅದಕ್ಕೆ ಮಾಡುವ, ಪೂರ್ಣಪಟ್ಟಿ ಇತ್ಯಾದಿ ಉಪಚಾರಗಳನ್ನು ಮಾಡಿಕೊಳ್ಳಬೇಕು.

**ಮನೆಮದ್ದು** : ತುರ್ತುಪರಿಸ್ಥಿತಿ ಇದ್ದಲ್ಲಿ ಶಸ್ತ್ರಚಿಕಿತ್ಸೆಯೇ ಸರಿಯಾದ ಮಾರ್ಗ. ಹೊಟ್ಟೆಯ ನೋವು ಬಂದ ತಕ್ಷಣವೇ ಈ ಹಂತಕ್ಕೆ ತಲುಪುವುದಿಲ್ಲ. ನಿಸರ್ಗೋಪಚಾರವನ್ನು ಪ್ರಾರಂಭಿಸಿದಲ್ಲಿ ಅನಾವಶ್ಯಕ ಶಸ್ತ್ರಚಿಕಿತ್ಸೆಯನ್ನು ತಪ್ಪಿಸ ಬಹುದು. ಧೈರ್ಯ ಹಾಗೂ ವಿವೇಚನೆಗಳು ಮುಖ್ಯ.

'ವೇದಗಳ ಸಾರಸರ್ವಸ್ವ ಉಪನಿಷತ್ತುಗಳಾದರೆ, ಉಪನಿಷತ್ತುಗಳ ಸಾರಸರ್ವಸ್ವ ಭಗವದ್ಗೀತೆ'-ಸಿ.ವಿ. ಚನ್ನಬಸವೇಶ್ವರ



ತನ್ನ ಅಪೂರ್ವ ಸಾಧನೆಯಿಂದ ವಿಶ್ವ ಸಂಸ್ಥೆಯಿಂದ ಗಾರ್ಡನ್ ಬ್ರೌನ್ ಯುವ ಸಾಧಕಿ ಪ್ರಶಸ್ತಿಯನ್ನು ಪಡೆದ ಅಂಧ ವಿದ್ಯಾರ್ಥಿನಿ ಕು॥ ಅಶ್ವಿನಿ ರವರು ಶ್ರೀಮಠಕ್ಕೆ ತಮ್ಮ ತಂದೆ ತಾಯಿಗಳೊಂದಿಗೆ ಆಗಮಿಸಿ ಪರಮಪೂಜ್ಯ ಶ್ರೀಗಳವರ ಅಶೀರ್ವಾದ ಪಡೆದರು.



ಪರಮಪೂಜ್ಯ ಶ್ರೀ ಶ್ರೀಗಳವರು ತುಮಕೂರಿನಲ್ಲಿ ಸಿಟಿ ಯೂನಿಯನ್ ಬ್ಯಾಂಕಿನ ನೂತನ ಕಟ್ಟಡವನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಬ್ಯಾಂಕಿನ ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು.




ತುಮಕೂರಿನ ಶ್ರೀ ಗುರುಶ್ರೀ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹಿರಿಯ ಐ.ಎ.ಎಸ್. ಅಧಿಕಾರಿ ಡಾ. ನಾಗಲಾಂಬಿಕ ದೇವಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಪೂಜ್ಯ ಶ್ರೀ ಶ್ರೀ ಆಟವೀ ಶಿವಲಿಂಗ ಸ್ವಾಮೀಜಿಯವರ ನೇತೃತ್ವದಲ್ಲಿ ಚಿಕ್ಕತೊಟ್ಲುಕೆರೆ ಶ್ರೀ ಗುರು ಆಟವೀ ಜಂಗಮ ಮಠದಲ್ಲಿ ಏರ್ಪಡಿಸಿದ್ದ ರುದ್ರಾಕ್ಷಿ ಗಿಡ ನೆಡುವ ಕಾರ್ಯಕ್ರಮಕ್ಕೆ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಚಾಲನೆ ನೀಡಿದರು.



ತುಮಕೂರಿನ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ನಡೆದ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಶಾಸಕ ಡಾ. ರಫೀಕ್ ಅಹ್ಮದ್ ರವರ ಉಪಸ್ಥಿತಿಯಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉದ್ಘಾಟಿಸಿದರು.



ತುಮಕೂರಿನ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜಿನಲ್ಲಿ ಏರ್ಪಡಿಸಿದ್ದ "ಭಾಷೆ ಮತ್ತು ವ್ಯಾಕರಣಗಳ ಆಂತರಿಕ ಸಂಬಂಧ" ಕುರಿತ ಕಾರ್ಯಾಗಾರವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಉದ್ಘಾಟಿಸಿದರು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru 10. Ph : 23404232